**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.**- (1) ಈ ಅಧಿನಿಯಮವನ್ನು **ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ಅಧಿನಿಯಮ, 2010** ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 3ನೇ ಪ್ರಕರಣದ ತಿದ್ದುಪಡಿ.**- ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮ, 2000ದ (2001ರ ಕರ್ನಾಟಕ ಅಧಿನಿಯಮ 29) (ಇದರಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 3ನೇ ಪ್ರಕರಣದಲ್ಲಿ,-

(1) (1)ನೇ ಉಪಪ್ರಕರಣದಲ್ಲಿ,-

(i) (ಬಿ) ಖಂಡದಲ್ಲಿ, "ಬಳ್ಳಾರಿ" ಮತ್ತು "ಕೊಪ್ಪಳ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು;

(ii) (ಸಿ) ಖಂಡದಲ್ಲಿ "ಬಾಗಲಕೋಟೆ, ಬೆಳಗಾವಿ, ವಿಜಾಪುರ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು;

(2) (1ಸಿ) ಉಪಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:-

"(1ಡಿ)ಬಳ್ಳಾರಿಯಲ್ಲಿ ಕೇಂದ್ರ ಕಾರ್ಯಸ್ಥಾನವನ್ನು ಹೊಂದಿರುವ ಮತ್ತು ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳ ಪ್ರದೇಶದ ಮೇಲೆ ಪ್ರಾದೇಶಿಕ ಅಧಿಕಾರ ಕ್ಷೇತ್ರ ವ್ಯಾಪ್ತಿಯನ್ನು ಹೊಂದಿರುವ ವಿಜಯನಗರ ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸತಕ್ಕದ್ದು.

(1ಇ) ಬೆಳಗಾವಿಯಲ್ಲಿ ಕೇಂದ್ರ ಕಾರ್ಯಸ್ಥಾನವನ್ನು ಹೊಂದಿರುವ ಮತ್ತು ಬೆಳಗಾವಿ, ಬಾಗಲಕೋಟೆ ಹಾಗೂ ವಿಜಾಪುರ ಜಿಲ್ಲೆಗಳ ಪ್ರದೇಶದ ಮೇಲೆ ಪ್ರಾದೇಶಿಕ ಅಧಿಕಾರ ಕ್ಷೇತ್ರ ವ್ಯಾಪ್ತಿಯನ್ನು ಹೊಂದಿರುವ ರಾಣಿಚನ್ನಮ್ಮ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸತಕ್ಕದ್ದು."

**3. 5ನೇ ಪ್ರಕರಣದ ತಿದ್ದುಪಡಿ.**- ಮೂಲ ಅಧಿನಿಯಮದ 5ನೇ ಪ್ರಕರಣದಲ್ಲಿ (4)ನೇ ಉಪಪ್ರಕರಣದ ತರುವಾಯ ಈ ಮುಂದಿನ ಉಪ ಪ್ರಕರಣವನ್ನು ಸೇರಿಸತಕ್ಕದ್ದು, ಎಂದರೆ:-

"(5) ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ಅಧಿನಿಯಮ, 2010ರ ಪ್ರಾರಂಭದ ದಿನಾಂಕಕ್ಕೆ ಮೊದಲು, ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಗಳಲ್ಲಿರುವ ಅಥವಾ ಬೆಳಗಾವಿ, ಬಾಗಲಕೋಟೆ ಮತ್ತು ವಿಜಾಪುರ ಜಿಲ್ಲೆಗಳಲ್ಲಿರುವ ಯಾವುವೇ ಕಾಲೇಜುಗಳು ಅಥವಾ ಶೈಕ್ಷಣಿಕ ಸಂಸ್ಥೆಗಳು, ಅನುಕ್ರಮವಾಗಿ ಗುಲಬರ್ಗಾ ವಿಶ್ವವಿದ್ಯಾನಿಲಯದಿಂದ ಅಥವಾ ಕರ್ನಾಟಕ ವಿಶ್ವವಿದ್ಯಾನಿಲಯದಿಂದ ಅನುಭವಿಸುತ್ತಿರುವ ಯಾವುದೇ ವಿಶೇಷಾಧಿಕಾರವನ್ನು ಈ ಸಂಬಂಧದಲ್ಲಿ ರಾಜ್ಯ ಸರ್ಕಾರವು ನಿರ್ದಿಷ್ಟಪಡಿಸಬಹುದಾದಂಥ ದಿನಾಂಕದಿಂದ ಜಾರಿಗೆ ಬರುವಂತೆ ಹಿಂತೆಗೆದುಕೊಳ್ಳಲಾಗಿದೆ ಎಂದು ಭಾವಿಸತಕ್ಕದ್ದು ಮತ್ತು ಗುಲಬರ್ಗಾ ಅಥವಾ ಕರ್ನಾಟಕ ವಿಶ್ವವಿದ್ಯಾನಿಲಯದ ವಿಶೇಷಾಧಿಕಾರಗಳಿಗೆ ಈ ಹಿಂದೆ ಪ್ರವೇಶ ಪಡೆದುಕೊಂಡಿದ್ದ ಅಥವಾ ಸಂಯೋಜಿತವಾಗಿದ್ದ, ಎಲ್ಲ ಅಂಥ ಕಾಲೇಜುಗಳು ಅಥವಾ ಶೈಕ್ಷಣಿಕ ಸಂಸ್ಥೆಗಳು, ಅನುಕ್ರಮವಾಗಿ ಬಳ್ಳಾರಿಯ ವಿಜಯನಗರ ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾನಿಲಯ ಅಥವಾ ಬೆಳಗಾವಿಯ ರಾಣಿಚನ್ನಮ್ಮ ವಿಶ್ವವಿದ್ಯಾನಿಲಯದ ವಿಶೇಷಾಧಿಕಾರಗಳಿಗೆ ಪ್ರವೇಶ ಪಡೆದುಕೊಂಡಿವೆ ಎಂದು ಅಥವಾ ಅದಕ್ಕೆ ಸಂಯೋಜಿತವಾಗಿವೆ ಎಂದು ಭಾವಿಸತಕ್ಕದ್ದು."

**4. 14ನೇ ಪ್ರಕರಣದ ತಿದ್ದುಪಡಿ.**- ಮೂಲ ಅಧಿನಿಯಮದ 14ನೇ ಪ್ರಕರಣದಲ್ಲಿ, (4)ನೇ ಉಪಪ್ರಕರಣದ ಐದನೇ ಪರಂತುಕದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:-

"ಮತ್ತೂ ಪರಂತು, ಈ ಪ್ರಕರಣದಲ್ಲಿ ವಿರುದ್ಧವಾದುದು ಏನೇ ಇದ್ದರೂ, ರಾಜ್ಯ ಸರ್ಕಾರವು, ತಾನು ನಿರ್ದಿಷ್ಟಪಡಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು ವಿಜಯನಗರ ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾನಿಲಯ ಮತ್ತು ರಾಣಿಚನ್ನಮ್ಮ ವಿಶ್ವವಿದ್ಯಾನಿಲಯದ ಪ್ರಥಮ ಕುಲಪತಿಯವರನ್ನು ನೇಮಕಮಾಡತಕ್ಕದ್ದು."

**5. ವಿಶೇಷಾಧಿಕಾರಿಯ ಅಧಿಕಾರಗಳು.**- ವಿಜಯನಗರ ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾನಿಲಯದ ಮತ್ತು ರಾಣಿಚನ್ನಮ್ಮ ವಿಶ್ವವಿದ್ಯಾನಿಲಯದ ಸ್ಥಾಪನೆಗಾಗಿ ಕ್ರಮ ಕೈಗೊಳ್ಳುವ ಉದ್ದೇಶಕ್ಕಾಗಿ ರಾಜ್ಯ ಸರ್ಕಾರವು ನೇಮಕಮಾಡಿದ ವಿಶೇಷಾಧಿಕಾರಿಯು, ಪ್ರಥಮ ಕುಲಪತಿಯವರ ನೇಮಕವಾಗುವವರೆಗೆ, ರಾಜ್ಯ ಸರ್ಕಾರವು ನಿರ್ದಿಷ್ಟಪಡಿಸಬಹುದಾದಂಥ ವಿಶ್ವವಿದ್ಯಾನಿಲಯದ ಮತ್ತು ಕುಲಪತಿಯವರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು.

**6. ಪ್ರಥಮ ಕುಲಪತಿಯವರ ಕರ್ತವ್ಯಗಳು.**- (1) ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ಅಧಿನಿಯಮ, 2010ರ ಪ್ರಾರಂಭದಿಂದ ಆರು ತಿಂಗಳುಗಳೊಳಗೆ ಅಥವಾ ಕುಲಾಧಿಪತಿಯವರು ನಿರ್ದೇಶಿಸಬಹುದಾದಂತೆ ಒಂದು ವರ್ಷಕ್ಕೆ ಮೀರದಂಥ ದೀರ್ಘ ಅವಧಿಯೊಳಗೆ, ವಿಜಯನಗರ ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾನಿಲಯದ ಮತ್ತು ರಾಣಿಚನ್ನಮ್ಮ ವಿಶ್ವವಿದ್ಯಾನಿಲಯದ ಸಿಂಡಿಕೇಟ್, ವಿದ್ಯಾವಿಷಯಕ ಪರಿಷತ್ತು ಮತ್ತು ಇತರ ಪ್ರಾಧಿಕಾರಗಳ ರಚನೆಗಾಗಿ ಏರ್ಪಾಡುಗಳನ್ನು ಮಾಡುವುದು ಪ್ರಥಮ ಕುಲಪತಿಯವರ ಕರ್ತವ್ಯವಾಗಿರತಕ್ಕದ್ದು.

(2) (1)ನೇ ಉಪ ಪ್ರಕರಣದ ಅಡಿಯಲ್ಲಿ ರಚಿತವಾದ ಪ್ರಾಧಿಕಾರಗಳು, ಈ ಸಂಬಂಧದಲ್ಲಿ ಕುಲಾಧಿಪತಿಯವರು ನಿರ್ದಿಷ್ಟಪಡಿಸಬಹುದಾದಂಥ ದಿನಾಂಕದಿಂದ ತಮ್ಮ ಅಧಿಕಾರಗಳನ್ನು ಚಲಾಯಿಸಲು ಮತ್ತು ಪ್ರಕಾರ್ಯಗಳನ್ನು ನೆರವೇರಿಸಲು ಪ್ರಾರಂಭಿಸತಕ್ಕದ್ದು.

**7. ತಾತ್ಕಾಲಿಕ ಉಪಬಂಧಗಳು.–** (1) ಈ ತಿದ್ದುಪಡಿ ಅಧಿನಿಯಮದ ಮೂಲಕ ತಿದ್ದುಪಡಿಯಾದ ಮೂಲ ಅಧಿನಿಯಮದಲ್ಲಿ ಏನೇ ಇದ್ದರೂ, ಪ್ರಥಮ ಕುಲಪತಿಯವರು, ಕುಲಾಧಿಪತಿಯವರ ಪೂರ್ವಾನುಮೋದನೆಯೊಂದಿಗೆ ಈ ತಿದ್ದುಪಡಿ ಅಧಿನಿಯಮದ ಮೂಲಕ ತಿದ್ದುಪಡಿಯಾದ ಮೂಲ ಅಧಿನಿಯಮದ ಉಪಬಂಧಗಳನ್ನು ಕಾರ್ಯಗತಗೊಳಿಸುವ ಉದ್ದೇಶಕ್ಕಾಗಿ, ವಿಜಯನಗರ ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾನಿಲಯ ಮತ್ತು ರಾಣಿಚನ್ನಮ್ಮ ವಿಶ್ವವಿದ್ಯಾನಿಲಯದ ಎಲ್ಲಾ ಅಥವಾ ಯಾವುವೇ ಪ್ರಕಾರ್ಯಗಳನ್ನು ನೆರವೇರಿಸಬಹುದು ಮತ್ತು ಆ ಉದ್ದೇಶಕ್ಕಾಗಿ, ತಿದ್ದುಪಡಿ ಅಧಿನಿಯಮದ ಮೂಲಕ ತಿದ್ದುಪಡಿಯಾದ ಮೂಲ ಅಧಿನಿಯಮದಲ್ಲಿ ಉಪಬಂಧಿಸಲಾದಂತೆ ವಿಶ್ವವಿದ್ಯಾನಿಲಯದ ಯಾವುದೇ ಪ್ರಾಧಿಕಾರವು, ಚಲಾಯಿಸಬೇಕಾದ ಅಥವಾ ನಿರ್ವಹಿಸಬೇಕಾದ ಯಾವುವೇ ಅಧಿಕಾರವನ್ನು ಅಥವಾ ಕರ್ತವ್ಯವನ್ನು, ತಿದ್ದುಪಡಿ ಅಧಿನಿಯಮದ ಮೂಲಕ ತಿದ್ದುಪಡಿಯಾದ ಮೂಲ ಅಧಿನಿಯಮದಲ್ಲಿ ಉಪಬಂಧಿಸಿರುವಂತೆ ಅದು ಅಸ್ತಿತ್ವಕ್ಕೆ ಬರುವವರೆಗೆ, ಚಲಾಯಿಸಬಹುದು ಅಥವಾ ನಿರ್ವಹಿಸಬಹುದು.

(2) ಮೂಲ ಅಧಿನಿಯಮದ 5ನೇ ಪ್ರಕರಣದ ಅಡಿಯಲ್ಲಿ ವಿಜಯನಗರ ಶ್ರೀಕೃಷ್ಣದೇವರಾಯ ವಿಶ್ವವಿದ್ಯಾನಿಲಯಕ್ಕೆ ಅಥವಾ ಸಂದರ್ಭಾನುಸಾರ ರಾಣಿಚನ್ನಮ್ಮ ವಿಶ್ವವಿದ್ಯಾನಿಲಯಕ್ಕೆ ಸಂಯೋಜಿಸಲಾಗಿದೆ ಎಂದು ಭಾವಿಸಲಾದ ಕಾಲೇಜುಗಳಿಗೆ ಅಥವಾ ಇತರ ಶಿಕ್ಷಣ ಸಂಸ್ಥೆಗಳಿಗೆ ಅನ್ವಯವಾಗತಕ್ಕ, ಗುಲಬರ್ಗಾ ವಿಶ್ವವಿದ್ಯಾನಿಲಯವು ಅಥವಾ ಕರ್ನಾಟಕ ವಿಶ್ವವಿದ್ಯಾನಿಲಯವು ರಚಿಸಿದ ಎಲ್ಲ ಪರಿನಿಯಮಗಳು, ಆರ್ಡಿನೆನ್ಸ್‌ಗಳು, ವಿನಿಯಮಗಳು ಮತ್ತು ನಿಯಮಗಳನ್ನು, ಸಂದರ್ಭಾನುಸಾರವಾಗಿ, ಅನುಕ್ರಮವಾಗಿ ವಿಜಯನಗರ ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾನಿಲಯವು ಅಥವಾ ರಾಣಿಚನ್ನಮ್ಮ ವಿಶ್ವವಿದ್ಯಾನಿಲಯವು ರಚಿಸಿದ ಪರಿನಿಯಮಗಳು, ಆರ್ಡಿನೆನ್ಸ್‌ಗಳು, ವಿನಿಯಮಗಳು ಮತ್ತು ನಿಯಮಗಳೆಂದು ಭಾವಿಸತಕ್ಕದ್ದು ಮತ್ತು ಅವು ವಿಜಯನಗರ ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾನಿಲಯ ಅಥವಾ ರಾಣಿಚನ್ನಮ್ಮ ವಿಶ್ವವಿದ್ಯಾನಿಲಯವು ತನ್ನದೇ ಆದ ಪರಿನಿಯಮಗಳು, ಆರ್ಡಿನೆನ್ಸ್‌ಗಳು, ವಿನಿಯಮಗಳು ಅಥವಾ ನಿಯಮಗಳನ್ನು ರಚಿಸುವವರೆಗೆ ಹಾಗೆಯೇ ಮುಂದುವರಿಯತಕ್ಕದ್ದು:

ಪರಂತು, ಕುಲಪತಿಯವರು, ಕುಲಾಧಿಪತಿಯವರ ಅನುಮೋದನೆಯೊಡನೆ ತಾವು ಅವಶ್ಯಕವೆಂದು ಪರಿಗಣಿಸಬಹುದಾದಂಥ ಮಾರ್ಪಾಡುಗಳನ್ನು ಅಥವಾ ಅಳವಡಿಕೆಗಳನ್ನು ಅದರಲ್ಲಿ ಮಾಡಬಹುದು.

**8. ಕೆಲವು ಪರೀಕ್ಷೆಗಳಿಗೆ ಸಂಬಂಧಿಸಿದಂತೆ ಉಳಿಸುವಿಕೆ.–** ಈ ತಿದ್ದುಪಡಿ ಅಧಿನಿಯಮದ ಮೂಲಕ ತಿದ್ದುಪಡಿಯಾದ ಮೂಲ ಅಧಿನಿಯಮದಲ್ಲಿ ಅಥವಾ ಈ ಅಧಿನಿಯಮದ ಪ್ರಾರಂಭದ ನಿಕಟಪೂರ್ವದಲ್ಲಿ ಅದರ ಅಡಿಯಲ್ಲಿ ರಚಿಸಿದ ಪರಿನಿಯಮಗಳಲ್ಲಿ, ಆರ್ಡಿನೆನ್ಸ್‌ಗಳಲ್ಲಿ, ವಿನಿಯಮಗಳಲ್ಲಿ ಅಥವಾ ನಿಯಮಗಳಲ್ಲಿ ಏನೇ ಇದ್ದರೂ,–

(ಎ) ಜಾರಿಯಲ್ಲಿದ್ದ ಪರಿನಿಯಮಗಳಿಗೆ, ಆರ್ಡಿನೆನ್ಸ್‌ಗಳಿಗೆ, ವಿನಿಯಮಗಳಿಗೆ ಅಥವಾ ನಿಯಮಗಳಿಗೆ ಅನುಸಾರವಾಗಿ, ಗುಲಬರ್ಗಾ ವಿಶ್ವವಿದ್ಯಾನಿಲಯ ಅಥವಾ ಕರ್ನಾಟಕ ವಿಶ್ವವಿದ್ಯಾನಿಲಯದ ಪದವಿಗಾಗಿ ವ್ಯಾಸಂಗ ಮಾಡುತ್ತಿದ್ದ ಯಾವೊಬ್ಬ ವಿದ್ಯಾರ್ಥಿಯು, ವಿಜಯನಗರ ಶ್ರೀಕೃಷ್ಣದೇವರಾಯ ವಿಶ್ವವಿದ್ಯಾನಿಲಯವು ಅಥವಾ ರಾಣಿಚನ್ನಮ್ಮ ವಿಶ್ವವಿದ್ಯಾನಿಲಯವು ಅಂಥ ಪರೀಕ್ಷೆಯನ್ನು ವ್ಯವಸ್ಥೆಗೊಳಿಸುವವರೆಗೆ, ಅನುಕ್ರಮವಾಗಿ ಗುಲ್ಬರ್ಗಾ ವಿಶ್ವವಿದ್ಯಾನಿಲಯ ಅಥವಾ ಕರ್ನಾಟಕ ವಿಶ್ವವಿದ್ಯಾನಿಲಯದ ಪರೀಕ್ಷೆಗೆ ಪ್ರವೇಶ ಪಡೆಯತಕ್ಕದ್ದು ಮತ್ತು ಅಂಥ ಪರೀಕ್ಷೆಯ ಫಲಿತಾಂಶದ ಆಧಾರದ ಮೇಲೆ ಅವನು ಅರ್ಹನಾಗುವ ಪದವಿ ಅಥವಾ ಡಿಪ್ಲೋಮಾವನ್ನು ಅವನಿಗೆ ಪ್ರದಾನ ಮಾಡತಕ್ಕದ್ದು.

(ಬಿ) ಗುಲಬರ್ಗಾ ವಿಶ್ವವಿದ್ಯಾಲಯವು ಅಥವಾ ಕರ್ನಾಟಕ ವಿಶ್ವವಿದ್ಯಾನಿಲಯವು ಯಾವುದೇ ಪರೀಕ್ಷೆಯನ್ನು ನಡೆಸಿದ್ದು, ಅದರ ಫಲಿತಾಂಶವು ಪ್ರಕಟಿಸಿದ್ದು ಅದಕ್ಕೆ ಸಂಬಂಧಪಟ್ಟ ಪದವಿ ಅಥವಾ ಡಿಪ್ಲೋಮಾವನ್ನು ಪ್ರದಾನ ಮಾಡಿರದಿದ್ದರೆ ಅಥವಾ ನೀಡಿರದಿದ್ದರೆ ಅಥವಾ ಅಂಥ ಯಾವುದೇ ಪರೀಕ್ಷೆಯ ಫಲಿತಾಂಶವನ್ನು ಗುಲಬರ್ಗಾ ವಿಶ್ವವಿದ್ಯಾನಿಲಯವು ಅಥವಾ ಕರ್ನಾಟಕ ವಿಶ್ವವಿದ್ಯಾನಿಲಯವು ಪ್ರಕಟಿಸಿರದಿದ್ದರೆ, ಆಗ ಅಂಥ ಪರೀಕ್ಷೆಯನ್ನು ಸಂದರ್ಭಾನುಸಾರ ಗುಲಬರ್ಗಾ ವಿಶ್ವವಿದ್ಯಾನಿಲಯ ಅಥವಾ ಕರ್ನಾಟಕ ವಿಶ್ವವಿದ್ಯಾನಿಲಯವು ನಡೆಸಿದೆ ಎಂದು ಭಾವಿಸತಕ್ಕದ್ದು.

**9. ತೊಂದರೆಗಳ ನಿವಾರಣೆ.–** ತಿದ್ದುಪಡಿ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವಲ್ಲಿ ಯಾವುದೇ ತೊಂದರೆ ಉದ್ಭವಿಸಿದರೆ, ರಾಜ್ಯ ಸರ್ಕಾರವು ತೊಂದರೆಯನ್ನು ನಿವಾರಿಸುವ ಉದ್ದೇಶಕ್ಕಾಗಿ ಅವಶ್ಯವೆಂದು ಅಥವಾ ಸೂಕ್ತವೆಂದು ತನಗೆ ಕಂಡುಬರಬಹುದಾದಂಥ ಉಪಬಂಧವನ್ನು, ಸರ್ಕಾರಿ ರಾಜ್ಯ ಪತ್ರದಲ್ಲಿ ಆದೇಶವನ್ನು ಪ್ರಕಟಿಸುವ ಮೂಲಕ ರಚಿಸಬಹುದು:

ಪರಂತು, ಈ ತಿದ್ದುಪಡಿ ಅಧಿನಿಯಮವು ಪ್ರಾರಂಭವಾದ ದಿನಾಂಕದಿಂದ ಎರಡು ವರ್ಷಗಳ ಅವಧಿ ಮುಕ್ತಾಯವಾದ ತರುವಾಯ ಅಂಥ ಯಾವ ಆದೇಶವನ್ನೂ ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ.ಬೋರೇಗೌಡ**

ಸರ್ಕಾರದ ಕಾರ್ಯದರ್ಶಿ

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಮಂಗಳವಾರ, ಜುಲೈ ೨೭, ೨೦೧೦ (ಶ್ರಾವಣ ೫, ಶಕ ವರ್ಷ ೧೯೩೨) | ನಂ. ೮೨೫ |
|---|---|---|

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 23 ಶಾಸನ 2008, ಬೆಂಗಳೂರು, ದಿನಾಂಕ: 27ನೇ ಜುಲೈ, 2010**

The Karnataka Irrigation and certain other Law (Amendment) Bill, 2010 ಕ್ಕೆ 2010ರ ಜುಲೈ ತಿಂಗಳ ಇಪ್ಪತ್ತ ನಾಲ್ಕನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2010ರ ಕರ್ನಾಟಕ ಅಧಿನಿಯಮ ಸಂಖ್ಯೆ: 29 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**KARNATAKA ACT NO 29 OF 2010**

(First Published in the Karnataka Gazette Extra-ordinary on the Twenty seventh day of July, 2010)

**THE KARNATAKA IRRIGATION AND CERTAIN OTHER LAW (AMENDMENT) ACT, 2010**

(Received the assent of the Governor on the Twenty fourth day of July, 2010)

An Act further to amend the Karnataka Irrigation Act, 1965 and the Karnataka Irrigation (Levy of Betterment Contribution and Water Rate) Act, 1957.

Whereas it is expedient further to amend the Karnataka Irrigation Act, 1965 (Karnataka Act 16 of 1965) and the Karnataka Irrigation (Levy of Betterment Contribution and Water Rate) Act, 1957 (Karnataka Act 28 of 1957), for the purposes hereinafter appearing;

Be it enacted by the Karnataka state Legislature in the Sixty first year of the Republic of India as follows:-

**1. Short title and commencement.-** (1) This Act may be called the Karnataka Irrigation and Certain Other law (Amendment) Act, 2010.

(2) It shall come into force at once.

**2. Amendment of Karnataka Act 16 of 1965.-** In the Karnataka Irrigation Act, 1965 (Karnataka Act 16 of 1965) (hereinafter referred to as the principal Act),-

(i) in section 62(A), in clause(2), after the words "or Karnataka Neeravari Nigam" the words "or Cauvery Neeravari Nigam Limited or any other body or Corporation established by the State Government for this purpose" shall be inserted;

(ii) in section 62AA, in clause (2), after the words `"or Karnataka Neeravari Nigam Limited", the words "or Cauvery Neeravari Nigam Limited or any other body or Corporation established by the State Government for this purpose" shall be inserted.

**3. Amendment of Karnataka Act 28 of 1957.-** In the Karnataka Irrigation (Levy of Betterment Contribution and Water Rate) Act, 1957 (Karnataka Act 28 of 1957), in section 10, in sub-section (1), in the proviso, after the words "or Karnataka Neeravari Nigam Limited" the words "or Cauvery Neeravari Nigam Limited or any other body or Corporation established by the State Government for this purpose" shall be inserted.

By Order and in the name of the Governor of Karnataka
**G.K. BOREGOWDA**
Secretary to Government
Department of Parliamentary Affairs and Legislation

ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಮಂಗಳವಾರ, ಜುಲೈ ೨೭, ೨೦೧೦ (ಶ್ರಾವಣ ೫, ಶಕ ವರ್ಷ ೧೯೩೨) | ನಂ. ೮೨೬ |
|---|---|---|

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 28 ಶಾಸನ 2010, ಬೆಂಗಳೂರು, ದಿನಾಂಕ: 27ನೇ ಜುಲೈ, 2010**

The Karnataka Highways (Amendment) Bill, 2010ಕ್ಕೆ 2010ರ ಜುಲೈ ತಿಂಗಳ ಇಪ್ಪತ್ತ ನಾಲ್ಕನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2010ರ ಕರ್ನಾಟಕ ಅಧಿನಿಯಮ ಸಂಖ್ಯೆ: 31 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**Karnataka Act No. 31 of 2010**

(First Published in the Karnataka Gazette Extra-ordinary on the Twenty seventh day of July 2010)

**THE KARNATAKA HIGHWAYS (AMENDMENT) ACT, 2010**

(Received the assent of the Governor on the Twenty fourth day of July 2010)

An Act further to amend the Karnataka Highways Act, 1964.

Whereas, it is expedient further to amend the Karnataka Highways Act, 1964 (Karnataka Act 44 of 1964) for the purposes hereinafter appearing;

Be it enacted by the Karnataka State Legislature in the sixty-first year of the Republic of India, as follows:-

**1. Short title and commencement.-** (1) This Act may be called the Karnataka Highways (Amendment) Act, 2010.

(2) It shall come into force at once.

**2. Amendment of section 19A.-** In the Karnataka Highways Act, 1964 (Karnataka Act 44 of 1964) (hereinafter referred to as the principal Act), in section 19A,-

(i) after sub-section (3), the following shall be inserted, namely:-

"(3A) Notwithstanding anything contained in section 48A, the Government may levy and collect, such rate of fee from the user of highways for service or benefits rendered by it, as may be notified by it in the official Gazette, different rates may be notified for different highways over different period of time, having regard to the expenditure involved in cost of acquisition of land and construction, development and maintenance of highway developed under public private partnership on annuity basis or by raising any loan or otherwise."

(ii) in sub-section (4), after the words, brackets and figure "in sub-section (1)", the words "or State Government" shall be inserted.

**3. Amendment of section 19B.-** In section 19B of the principal Act, for the words, brackets, figures and letter "in sub-section (1) of section 19A", the words, brackets, figures and letter "in sub-section(1) and sub-section (3A) of section 19A" shall be substituted.

By Order and in the name of the Governor of Karnataka

**G.K. BOREGOWDA**
Secretary to Government
Department of Parliamentary Affairs and Legislation

# ವಿಶೇಷ ಪತ್ರಿಕೆ


| ಭಾಗ – **IV-A** | ಬೆಂಗಳೂರು, ಮಂಗಳವಾರ, ಜುಲೈ ೨೭, ೨೦೧೦ (ಶ್ರಾವಣ ೫, ಶಕ ವರ್ಷ ೧೯೩೨) | ನಂ. ೮೭೭ |
|---|---|---|


**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 54 ಶಾಸನ 2009, ಬೆಂಗಳೂರು, ದಿನಾಂಕ: 27ನೇ ಜುಲೈ, 2010**

The Bangalore Water Supply and Sewerage(Amendment) Bill, 2010ಕ್ಕೆ 2010ರ ಜುಲೈ ತಿಂಗಳ ಇಪ್ಪತ್ತ ನಾಲ್ಕನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2010ರ ಕರ್ನಾಟಕ ಅಧಿನಿಯಮ ಸಂಖ್ಯೆ: 32 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**KARNATAKA ACT NO. 32 OF 2010**

(First published in the Karnataka Gazette Extra-ordinary on the Twenty seventh day of July, 2010)

**THE BANGALORE WATER SUPPLY AND SEWERAGE (AMENDMENT) ACT, 2010**

(Received the assent of the Governor on the Twenty fourth day of July, 2010)

An Act further to amend the Bangalore Water Supply and Sewerage Act, 1964.

Whereas, it is expedient further to amend the Bangalore Water Supply and Sewerage Act, 1964 (Karnataka Act 36 of 1964), for the purposes hereinafter appearing;

Be it enacted by the Karnataka State Legislature in the sixty First year of the Republic of India as follows:-

**1. Short title and commencement**: (1) This Act may be called the Bangalore Water Supply and Sewerage (Amendment) Act, 2010.

(2) It shall come into force at once.

**2. Insertion of new section 89A.-** In the Bangalore Water Supply and Sewerage Act, 1964 (Karnataka Act 36 of 1964) (hereinafter referred to as the principal Act), after section 89, the following shall be deemed to have been inserted, with effect from 1st day of January 2003, namely:-

"**89A.Collection of capital contribution from the beneficiary or borrowing loan etc., in respect of any project.-** In furtherance of implementation of any water supply and sanitation projects, the State Government may issue directions to the Board for making funding arrangements, to collect capital contribution from the beneficiaries of the project or through any Local Authority or to borrow loans from funding agencies or to borrow from the market as per requirements of the projects."

**3. Validation of assessment and collection of capital contribution.-** Notwithstanding anything contained in any judgment, decree or order of any Court, Tribunal or other authority to the contrary any direction through an order issued by the State Government to the Board for making funding arrangements, to collect capital contribution from the beneficiaries of any project (hereinafter referred to as capital contribution) or through a Local Authority as per requirements of the project and assessment or collection of any capital contribution from the beneficiaries of the project in accordance with such direction or order of the State Government made or purporting to have been made and any action or thing taken or done ( including any notices or orders issued) or assessment made and all proceedings held and any collection of capital contribution or amount purported to have been collected by way of capital contribution in relation to such assessment or collection in respect of such project with effect from 1st January 2003 shall be and shall be deemed to be valid and effective, as if such assessment or collection or action or thing, had been made, taken or done under the principal Act, as amended by this Act and accordingly,-

(a) all acts, proceedings or things done or any action taken by any Local Authority or as the case may be, the Board or any of its officer in connection with the assessment or collection of such capital contribution in respect of such project for all purposes be deemed to be, and to have always been done or taken in accordance with law;

(b) no suit or other proceedings shall be maintained or continued in any Court or Tribunal or before any authority for the refund of any such capital contribution; and

(c) no court shall enforce any decree or order directing the refund of any such capital contribution.

By Order and in the name of the Governor of Karnataka
**G.K. BOREGOWDA**
Secretary to Government
Department of Parliamentary Affairs and Legislation

# ವಿಶೇಷ ಪತ್ರಿಕೆ



| ಭಾಗ – V | ಬೆಂಗಳೂರು, ಬುಧವಾರ, ಜುಲೈ ೨೮, ೨೦೧೦ (ಶ್ರಾವಣ ೬, ಶಕ ವರ್ಷ ೧೯೩೨) | ನಂ. ೮೭೯ |
|---|---|---|



**ಒಳಾಡಳಿತ ಸಚಿವಾಲಯ**

**ಪೊಲೀಸ್ ಇಲಾಖೆ**

**POLCET-2010**

**(ISO-9001-2000 ಪ್ರಮಾಣಿತ ನೇಮಕಾತಿ ಪ್ರಕ್ರಿಯೆ)**

**ಪೊಲೀಸ್ ಕಾನ್ಸ್‌ಟೇಬಲ್ ನೇಮಕಾತಿ**

**ಸೇರ್ಪಡೆ (ADDENDUM)**

**ಸಂಖ್ಯೆ: 31/ನೇಮಕಾತಿ/2010–11, ದಿನಾಂಕ: 28ನೇ ಜುಲೈ, 2010**

**ವಿಷಯ :** ನಾಗರಿಕ ಪೊಲೀಸ್ ಕಾನ್ಸ್‌ಟೇಬಲ್, ಮಹಿಳಾ ಪೊಲೀಸ್ ಕಾನ್ಸ್‌ಟೇಬಲ್, ಪೊಲೀಸ್ ಕಾನ್ಸ್‌ಟೇಬಲ್ (ಎಫ್.ಪಿ.ಬಿ), ಮಹಿಳಾ ಪೊಲೀಸ್ ಕಾನ್ಸ್‌ಟೇಬಲ್ (ಎಫ್.ಪಿ.ಬಿ) ಮತ್ತು ಪೊಲೀಸ್ ಕಾನ್ಸ್‌ಟೇಬಲ್ (ವೈರ್‌ಲೆಸ್) ಹಾಗೂ ಮಹಿಳಾ ಪೊಲೀಸ್ ಕಾನ್ಸ್‌ಟೇಬಲ್ (ವೈರ್‌ಲೆಸ್) ಹುದ್ದೆಗಳಿಗೆ ಹೊಸದಾಗಿ ಸೃಜನೆಯಾಗಿರುವ ಹುದ್ದೆಗಳನ್ನು ಸೇರ್ಪಡಿಸುವ ಕುರಿತು.

**ಉಲ್ಲೇಖ:** 1. ನೇರ ನೇಮಕಾತಿಗಾಗಿ ಪ್ರಕಟಿಸಿದ ಅಧಿಸೂಚನೆ ಸಂಖ್ಯೆ: 31/ನೇಮಕಾತಿ/2010–11, ದಿನಾಂಕ: 13.04.2010

2. ಸರ್ಕಾರದ ಆದೇಶದ ಸಂಖ್ಯೆ: ಹೆಚ್‌ಡಿ 193 ಪಿಒಪಿ 2009, ದಿನಾಂಕ: 17.07.2009.

3. ಸರ್ಕಾರದ ಆದೇಶದ ಸಂಖ್ಯೆ: ಹೆಚ್‌ಡಿ 138 ಪಿಒಪಿ 2010, ದಿನಾಂಕ: 09.07.2010.

ಕರ್ನಾಟಕ ರಾಜ್ಯದ ಪೊಲೀಸ್ ಇಲಾಖೆಯಲ್ಲಿ ಖಾಲಿ ಇರುವ ನಾಗರಿಕ ಪೊಲೀಸ್ ಕಾನ್ಸ್‌ಟೇಬಲ್, ಮಹಿಳಾ ಪೊಲೀಸ್ ಕಾನ್ಸ್‌ಟೇಬಲ್, ಪೊಲೀಸ್ ಕಾನ್ಸ್‌ಟೇಬಲ್ (ಎಫ್.ಪಿ.ಬಿ), ಮಹಿಳಾ ಪೊಲೀಸ್ ಕಾನ್ಸ್‌ಟೇಬಲ್ (ಎಫ್.ಪಿ.ಬಿ) ಮತ್ತು ಪೊಲೀಸ್ ಕಾನ್ಸ್‌ಟೇಬಲ್ (ವೈರ್‌ಲೆಸ್) ಹಾಗೂ ಮಹಿಳಾ ಪೊಲೀಸ್ ಕಾನ್ಸ್‌ಟೇಬಲ್ (ವೈರ್‌ಲೆಸ್) ಖಾಲಿ ಹುದ್ದೆಗಳ ನೇರ ನೇಮಕಾತಿ ಪ್ರಕ್ರಿಯೆಯನ್ನು ಕೈಗೊಳ್ಳಲು ಉಲ್ಲೇಖಿತ (1)ರ ಅಧಿಸೂಚನೆಯನ್ನು ಪ್ರಕಟಿಸಲಾಗಿರುತ್ತದೆ. ತದನಂತರ ಮೈಸೂರು ನಗರಕ್ಕೆ ಸಂಬಂಧಿಸಿದಂತೆ 68 ಖಾಲಿ ಹುದ್ದೆಗಳು ಹೊಸದಾಗಿ ಸೃಜನೆಗೊಂಡಿದ್ದರಿಂದ ಅವುಗಳನ್ನು ಸಹ ಅಧಿಸೂಚನೆ ದಿನಾಂಕ: 13.04.2010ಕ್ಕೆ ಸೇರ್ಪಡಿಸಲು ತಿದ್ದೋಲೆ ಅಧಿಸೂಚನೆಯನ್ನು ದಿನಾಂಕ: 13.05.2010 ರನ್ವಯ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲಾಗಿದ್ದು, ನೇಮಕಾತಿ ಪ್ರಕ್ರಿಯೆಯು ಪ್ರಗತಿಯಲ್ಲಿರುತ್ತದೆ.

ಈ ಹಿನ್ನೆಲೆಯಲ್ಲಿ ಉಲ್ಲೇಖಿತ (2) ಮತ್ತು ಉಲ್ಲೇಖಿತ (3)ರ ಸರ್ಕಾರದ ಆದೇಶಗಳಲ್ಲಿ ರಾಮನಗರ ಜಿಲ್ಲೆಗೆ ಮತ್ತು ಮಂಗಳೂರು ಕಮೀಷನರೇಟ್‌ಗೆ ಹೊಸದಾಗಿ ಖಾಲಿ ಹುದ್ದೆಗಳನ್ನು ಸೃಜಿಸಲಾಗಿದ್ದು, ಅವುಗಳನ್ನು ಸಹ ಸದ್ಯ ಪ್ರಗತಿಯಲ್ಲಿರುವ ನೇಮಕಾತಿ ಪ್ರಕ್ರಿಯೆಗೆ ಸೇರ್ಪಡೆ ಮಾಡಲು ಅಧಿಸೂಚನೆ ದಿನಾಂಕ: 13.04.2010 ಗೆ ಮುಂದುವರೆಸುತ್ತಾ ಈ ಅಧಿಸೂಚನೆಯನ್ನು ಪ್ರಕಟಿಸಲಾಗಿದೆ.

**ರಾಮನಗರ ಜಿಲ್ಲೆ**

ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಗಿನಂತಿದೆ. ಅವಶ್ಯಕತೆ ಹಾಗೂ ಸಂದರ್ಭಕ್ಕೆ ಅನುಗುಣವಾಗಿ ಇದನ್ನು ಬದಲಾವಣೆ ಮಾಡಿಕೊಳ್ಳಬಹುದಾಗಿದೆ.

ಎ) ನಾಗರಿಕ ಪೊಲೀಸ್ ಕಾನ್ಸ್‌ಟೇಬಲ್ ಹುದ್ದೆಗೆ –65, ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಗಿನಂತಿದೆ.

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|---|
| ಸಾಮಾನ್ಯ ವರ್ಗ | 32 | 08 | 03 | 01 | 01 | 19 |
| ಪರಿಶಿಷ್ಟ ಜಾತಿ | 10 | 03 | 01 | – | – | 06 |
| ಪರಿಶಿಷ್ಟ ಪಂಗಡ | 02 | – | – | – | – | 02 |
| ಪ್ರವರ್ಗ–1 | 03 | 01 | – | – | – | 02 |
| ಪ್ರವರ್ಗ–2ಎ | 10 | 03 | 01 | – | – | 06 |
| ಪ್ರವರ್ಗ–2ಬಿ | 03 | 01 | – | – | – | 02 |
| ಪ್ರವರ್ಗ–3ಎ | 02 | – | – | – | – | 02 |
| ಪ್ರವರ್ಗ–3ಬಿ | 03 | 01 | – | – | – | 02 |
| **ಒಟ್ಟು** | **65** | **17** | **05** | **01** | **01** | **41** |

ಬಿ) ಮಹಿಳಾ ಪೊಲೀಸ್ ಕಾನ್ಸ್‌ಟೇಬಲ್ ಹುದ್ದೆಗೆ –07, ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಗಿನಂತಿದೆ.

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|---|
| ಸಾಮಾನ್ಯ ವರ್ಗ | 03 | 01 | – | – | – | 02 |
| ಪರಿಶಿಷ್ಟ ಜಾತಿ | 01 | – | – | – | – | 01 |
| ಪರಿಶಿಷ್ಟ ಪಂಗಡ | 01 | – | – | – | – | 01 |
| ಪ್ರವರ್ಗ–1 | 01 | – | – | – | – | 01 |
| ಪ್ರವರ್ಗ–2ಎ | 01 | – | – | – | – | 01 |
| ಪ್ರವರ್ಗ–2ಬಿ | – | – | – | – | – | – |
| ಪ್ರವರ್ಗ–3ಎ | – | – | – | – | – | – |
| ಪ್ರವರ್ಗ–3ಬಿ | – | – | – | – | – | – |
| **ಒಟ್ಟು** | **07** | **01** | – | – | – | **06** |

ಟಿಪ್ಪಣಿ:–

ಮಾಜಿ ಸೈನಿಕರು, ಗ್ರಾಮೀಣ, ಕನ್ನಡ ಮಾಧ್ಯಮ ಮತ್ತು ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ ಅಂತಹ ಖಾಲಿ ಹುದ್ದೆಗಳನ್ನು ಮೇಲೆ ನಮೂದಿಸಿರುವ ಪ್ರವರ್ಗದ ಇತರರು ಅಭ್ಯರ್ಥಿಗಳಿಂದ ತುಂಬಲಾಗುವುದು.

ಸಹಿ/–

ಅಧ್ಯಕ್ಷರು, ನೇಮಕಾತಿ ಸಮಿತಿ, ರಾಮನಗರ ಜಿಲ್ಲೆ.

**ಮಂಗಳೂರು ನಗರ**

ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಗಿನಂತಿದೆ. ಅವಶ್ಯಕತೆ ಹಾಗೂ ಸಂದರ್ಭಕ್ಕೆ ಅನುಗುಣವಾಗಿ ಇದನ್ನು ಬದಲಾವಣೆ ಮಾಡಿಕೊಳ್ಳಬಹುದಾಗಿದೆ.

ಎ) ನಾಗರಿಕ ಪೊಲೀಸ್ ಕಾನ್ಸ್‌ಟೇಬಲ್ ಹುದ್ದೆಗೆ –180, ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಗಿನಂತಿದೆ.

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|---|
| ಸಾಮಾನ್ಯ ವರ್ಗ | 90 | 23 | 09 | 04 | 04 | 50 |
| ಪರಿಶಿಷ್ಟ ಜಾತಿ | 27 | 07 | 02 | 01 | 01 | 16 |
| ಪರಿಶಿಷ್ಟ ಪಂಗಡ | 06 | 02 | – | – | – | 04 |
| ಪ್ರವರ್ಗ–1 | 08 | 02 | – | – | – | 06 |
| ಪ್ರವರ್ಗ–2ಎ | 27 | 07 | 02 | 01 | 01 | 16 |
| ಪ್ರವರ್ಗ–2ಬಿ | 07 | 02 | – | – | – | 05 |
| ಪ್ರವರ್ಗ–3ಎ | 07 | 02 | – | – | – | 05 |
| ಪ್ರವರ್ಗ–3ಬಿ | 08 | 02 | – | – | – | 06 |
| **ಒಟ್ಟು** | **180** | **47** | **13** | **06** | **06** | **108** |

ಬಿ) ಮಹಿಳಾ ಪೊಲೀಸ್ ಕಾನ್ಸ್‌ಟೇಬಲ್ ಹುದ್ದೆಗೆ –20, ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಗಿನಂತಿದೆ.

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|---|
| ಸಾಮಾನ್ಯ ವರ್ಗ | 10 | 03 | – | – | – | 07 |
| ಪರಿಶಿಷ್ಟ ಜಾತಿ | 03 | 01 | – | – | – | 02 |
| ಪರಿಶಿಷ್ಟ ಪಂಗಡ | 01 | – | – | – | – | 01 |
| ಪ್ರವರ್ಗ–1 | 01 | – | – | – | – | 01 |
| ಪ್ರವರ್ಗ–2ಎ | 02 | – | – | – | – | 02 |
| ಪ್ರವರ್ಗ–2ಬಿ | 01 | – | – | – | – | 01 |
| ಪ್ರವರ್ಗ–3ಎ | 01 | – | – | – | – | 01 |
| ಪ್ರವರ್ಗ–3ಬಿ | 01 | – | – | – | – | 01 |
| **ಒಟ್ಟು** | **20** | **04** | **–** | **–** | **–** | **16** |

ಟಿಪ್ಪಣಿ:–

ಮಾಜಿ ಸೈನಿಕರು, ಗ್ರಾಮೀಣ, ಕನ್ನಡ ಮಾಧ್ಯಮ ಮತ್ತು ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ ಅಂತಹ ಖಾಲಿ ಹುದ್ದೆಗಳನ್ನು ಮೇಲೆ ನಮೂದಿಸಿರುವ ಪ್ರವರ್ಗದ ಇತರರು ಅಭ್ಯರ್ಥಿಗಳಿಂದ ತುಂಬಲಾಗುವುದು.

ಸಹಿ/–

ಅಧ್ಯಕ್ಷರು, ನೇಮಕಾತಿ ಸಮಿತಿ, ಮಂಗಳೂರು ನಗರ.

**1. ಅರ್ಜಿ ಪಡೆಯುವ ಮತ್ತು ಸಲ್ಲಿಸುವ ವಿಧಾನ :–** ಮೇಲಿನ ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಪೊಲೀಸ್ ಸೂಪರಿಂಟೆಂಡೆಂಟ್/ಪೊಲೀಸ್ ಕಮೀಷನರ್ ರವರ ಕಛೇರಿಗಳಲ್ಲಿ ಈ ಕೆಳಗೆ ನಮೂದಿಸಿರುವ ದಿನಾಂಕಗಳಂದು ಅರ್ಜಿಗಳನ್ನು ಮಾರಾಟ ಮಾಡುವುದಲ್ಲದೇ ಆನ್–ಲೈನ್ (ಎಲೆಕ್ಟ್ರಾನಿಕ್ ಮಾರ್ಗ) ಮುಖಾಂತರವು ಸಹ ಸಲ್ಲಿಸಬಹುದು

ಎ) <u>ಶುಲ್ಕ:</u>

| **ಅಭ್ಯರ್ಥಿಗಳು ಈ ಕೆಳಕಂಡ ವರ್ಗಗಳಿಗೆ ಸೇರಿದವರಾಗಿದ್ದರೆ, ಅದರ ಮುಂದೆ ನಮೂದಿಸಿರುವ ಪರೀಕ್ಷಾ ಶುಲ್ಕವನ್ನು ಪಾವತಿಸುವುದು** | **ಆನ್‌ಲೈನ್** | **ಖುದ್ದಾಗಿ** |
|---|---|---|
| ಪ.ಜಾ, ಪ.ಪಂ, ಪ್ರವರ್ಗ–1 | ರೂ.100/– | ರೂ.150/– |
| ಇತರೆ | ರೂ.250/– | ರೂ.300/– |

<u>ಟಿಪ್ಪಣಿ</u>: ಒಮ್ಮೆ ಪರೀಕ್ಷಾ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ ಅಥವಾ ಅದನ್ನು ನೇಮಕಾತಿ ಸಮಿತಿಯು ನಡೆಸುವ ಇತರೆ ಯಾವುದೇ ಪರೀಕ್ಷೆ ಅಥವಾ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ. ಮೇಲಿನ ಕಾಲಂಗಳಲ್ಲಿ ನಮೂದಿಸಿದಂತೆ ಅಭ್ಯರ್ಥಿಗೆ ಅನ್ವಯಿಸುವ ಒಟ್ಟು ಪರೀಕ್ಷಾ ಶುಲ್ಕವನ್ನು **ನಗದು ರೂಪದಲ್ಲಿ ಮಾತ್ರ** ಪಾವತಿಸತಕ್ಕದ್ದು. (ಪಾವತಿಸುವ ವಿವರಗಳನ್ನು ಈ ಕೆಳಗಿನ ಪ್ಯಾರಾದಲ್ಲಿ ಸೂಚಿಸಲಾಗಿದೆ). **ಡಿಡಿ, ಪೋಸ್ಟಲ್ ಆರ್ಡರ್, ಮನಿ ಆರ್ಡರ್ ಇವುಗಳನ್ನು ಸ್ವೀಕರಿಸಲಾಗುವುದಿಲ್ಲ.**

**ಬಿ) ಖುದ್ದಾಗಿ ಅರ್ಜಿ ಪಡೆದು ಸಲ್ಲಿಸುವ ಅಭ್ಯರ್ಥಿಗಳು :–**

ಅಭ್ಯಥಿಗಳು ರಾಮನಗರ ಜಿಲ್ಲೆ / ಮಂಗಳೂರು ಕಮೀಷನರೇಟ್‌ದಲ್ಲಿ ಸೇವೆ ಸಲ್ಲಿಸಲು ಇಚ್ಚಸುವರೋ ಅಂತಹ ಜಿಲ್ಲೆ / ಕಮೀಷನರೇಟ್‌ಗಳಲ್ಲಿ ಅರ್ಜಿ ಪಡೆದು ಭರ್ತಿ ಮಾಡಿ ಅಲ್ಲಿಯೇ ಖುದ್ದಾಗಿ ಸಲ್ಲಿಸುವುದು. ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಮತ್ತು ಪ್ರವರ್ಗ–1ರ ಅಭ್ಯರ್ಥಿಗಳು ಶುಲ್ಕ ರೂ. 150/– ಹಾಗೂ ಇತರೆ ಪ್ರವರ್ಗಕ್ಕೆ ಸೇರಿದ ಎಲ್ಲಾ ಅಭ್ಯರ್ಥಿಗಳು ಶುಲ್ಕ ರೂ. 300/– ಗಳನ್ನು **ನಗದು ರೂಪದಲ್ಲಿ** ಪಾವತಿಸಿ ದಿನಾಂಕ: 02–08–2010 ರಿಂದ 11–08–2010 ರವರೆಗೆ ಬೆಳಿಗ್ಗೆ 10–00 ಗಂಟೆಯಿಂದ ಸಾಯಂಕಾಲ 5–00 ಗಂಟೆಯವರೆಗೆ ಎಲ್ಲಾ ಕೆಲಸದ ದಿನಗಳಂದು (Working Days) ಅರ್ಜಿಯನ್ನು ಸಂಬಂಧಪಟ್ಟ ಪೊಲೀಸ್ ಸೂಪರಿಂಟೆಂಡೆಂಟ್ / ಕಮೀಷನರೇಟ್ ಕಛೇರಿಗಳಲ್ಲಿ ಪಡೆದುಕೊಳ್ಳಬಹುದಾಗಿದೆ. ಅಭ್ಯರ್ಥಿಗಳು ಭರ್ತಿ ಮಾಡಿದ ಅರ್ಜಿಗಳನ್ನು ದಿನಾಂಕ: 11–08–2010 ರಂದು ಸಾಯಂಕಾಲ 6–00 ಗಂಟೆಯೊಳಗೆ ಅಥವಾ ಅದಕ್ಕಿಂತ ಮುಂಚಿತವಾಗಿ **ಅರ್ಜಿಯನ್ನು ಖರೀದಿಸಿದ ಕಛೇರಿಯಲ್ಲಿಯೇ** ಖುದ್ದಾಗಿ ಸಲ್ಲಿಸಬಹುದಾಗಿರುತ್ತದೆ.

**ಸಿ) ಆನ್–ಲೈನ್ ಮುಖಾಂತರ (On-line) ಮುಖಾಂತರ:**

ಅಭ್ಯರ್ಥಿಯು ಇಲಾಖೆಯ ಅಧಿಕೃತ ವೆಬ್‌ಸೈಟ್ www.ksp.gov.in ನಲ್ಲಿ ಮೊದಲಿಗೆ ರಾಮನಗರ ಜಿಲ್ಲೆ / ಮಂಗಳೂರು ನಗರದಲ್ಲಿ ಅರ್ಜಿ ಸಲ್ಲಿಸಲು ಬಯಸುವಿರೋ ಆ ಜಿಲ್ಲೆ / ನಗರವನ್ನು ಆಯ್ಕೆ ಮಾಡಿ ಅತೀ ಜಾಗರೂಕತೆಯಿಂದ ಭರ್ತಿ ಮಾಡಬೇಕು, ಭರ್ತಿ ಮಾಡಿದ ನಂತರ ಅಭ್ಯರ್ಥಿಯ ಹೆಸರು, ಜಾತಿ ವಗೈರೆ ಮಾಹಿತಿ ತುಂಬಿದ ನಂತರ ಹುಟ್ಟಿದ ದಿನಾಂಕವನ್ನು ನಮೂದಿಸಬೇಕು ನಂತರ Cash Payment Option ಆಯ್ಕೆ ಮಾಡಿದಾಗ ಒಂದು ತ್ರಿಪ್ರತಿ (Triplicate) ಚಲನ್ ತಯಾರಾಗುತ್ತದೆ ಹಾಗೂ ಅರ್ಜಿ ಸಂಖ್ಯೆಯು ಸೃಜನೆಯಾಗುತ್ತದೆ. ಆ ಚಲನ್‌ನಲ್ಲಿ ನಮೂದಾಗಿರುವ ಒಟ್ಟು ಪರೀಕ್ಷಾ ಶುಲ್ಕವನ್ನು **ನಗದು ರೂಪದಲ್ಲಿಯೇ** ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ಅಧಿಕೃತ ಶಾಖೆಗಳಲ್ಲಿ ಚಲನ್ ಮುಖಾಂತರ ಪಾವತಿಸಬೇಕಾಗಿರುತ್ತದೆ. ಬ್ಯಾಂಕ್‌ನಲ್ಲಿ ಹಣ ಪಾವತಿಸಿದ ನಂತರ **ಬ್ಯಾಂಕ್‌ನವರು ಜರ್ನಲ್ ನಂಬರ್‌ನ್ನು ನೀಡುವರು** ಅದನ್ನು ಪುನಃ ಇಲಾಖೆಯ ಅಧಿಕೃತ ವೆಬ್‌ಸೈಟ್ www.ksp.gov.in ನಲ್ಲಿ ನಮೂದಿಸಿದ ನಂತರವೇ ಅರ್ಜಿ ತೆರೆಯುತ್ತದೆ (ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ಅಧಿಕೃತ ಶಾಖೆಗಳ ಮಾಹಿತಿ ಇಲಾಖೆಯ ವೆಬ್‌ಸೈಟ್‌ನಲ್ಲಿ ನೋಡಬಹುದು).

ಅರ್ಹ ಅಭ್ಯರ್ಥಿಗಳು ಅರ್ಜಿಯನ್ನು On-line ಮುಖಾಂತರ ಪಡೆದುಕೊಂಡು (Download), ಕಂಪ್ಯೂಟರ್ ಪರದೆಯ ಮೇಲೆ ಅರ್ಜಿಯನ್ನು ತುಂಬಬೇಕು. ಅರ್ಜಿಯನ್ನು ಭರ್ತಿ ಮಾಡುವ ಮುನ್ನ ಅಭ್ಯರ್ಥಿಯು ಒಂದು ಬಿಳಿ ಹಾಳೆಯ ಮೇಲೆ ಪಾಸ್‌ಪೋರ್ಟ್ ಅಳತೆಯ ಬಣ್ಣದ ಭಾವಚಿತ್ರವನ್ನು ಅಂಟಿಸಿ ಅದರ ಕೆಳಗೆ ಸಹಿಯನ್ನು ಮಾಡಿ (Soft Copy - less than 100 KB) ಅದನ್ನು ಸ್ಕ್ಯಾನ್ ಮಾಡಿಟ್ಟುಕೊಂಡಿರಬೇಕು. ಸ್ಕ್ಯಾನ್ ಮಾಡಿಟ್ಟುಕೊಂಡಿರುವ ಭಾವಚಿತ್ರ ಮತ್ತು ಸಹಿಯನ್ನು ಕಂಪ್ಯೂಟರ್ ಮುಖೇನ ಅಪ್‌ಲೋಡ್ (Upload) ಮಾಡುವುದು. ಇಲ್ಲವಾದಲ್ಲಿ ಅಂತಹ ಅರ್ಜಿದಾರರು ಆನ್‌ಲೈನ್‌ನಲ್ಲಿ ಅರ್ಜಿಯನ್ನು ತುಂಬಿ ಮುಂದುವರೆಯಲು ಸಾಧ್ಯವಾಗುವುದಿಲ್ಲ. ಅಭ್ಯರ್ಥಿಗಳು ನೀಡಿರುವ ವಿವರಗಳು ಎಲ್ಲ ರೀತಿಯಿಂದಲೂ ಸಮರ್ಪಕವಾಗಿದ್ದು ಅರ್ಹತೆಯನ್ನು ಹೊಂದಿದ್ದಲ್ಲಿ ಮಾತ್ರ ಅರ್ಜಿದಾರರು ಆನ್‌ಲೈನ್‌ನಲ್ಲಿ ಮುಂದುವರೆಯಲು ಸಾಧ್ಯವಾಗುತ್ತದೆ. <u>ಅಭ್ಯರ್ಥಿಗಳು</u>

ಅರ್ಜಿಯ ಪ್ರತಿಯನ್ನು ಪ್ರಿಂಟ್ ಮಾಡುವ ಮೊದಲು **ಪ್ರಿವ್ಯೂ** (Preview) ನ್ನು ನೋಡಿ ಭರ್ತಿ ಮಾಡಿರುವ ಎಲ್ಲಾ ವಿವರಗಳು ಸರಿಯಾಗಿದೆಯೇ ಎಂದು ಪರೀಕ್ಷಿಸಿ ಭರ್ತಿ ಮಾಡಿದ ಆನ್–ಲೈನ್ ಅರ್ಜಿಯ ಪ್ರತಿಯನ್ನು ಪ್ರಿಂಟ್ ಮಾಡಿ ತೆಗೆದಿಟ್ಟುಕೊಳ್ಳತಕ್ಕದ್ದು. ಭರ್ತಿ ಮಾಡಿದ ವಿವರಗಳು ತಪ್ಪಾಗಿದ್ದಲ್ಲಿ, ಅದನ್ನು ಸರಿಪಡಿಸಿ ಪ್ರಿಂಟ್ ಪಡೆಯುವಂತೆ ತಿಳಿಸಲಾಗಿದೆ. ಈ ಅರ್ಜಿ ಸಂಖ್ಯೆಯು ಮುಂದಿನ ನೇಮಕಾತಿ ಪ್ರಕ್ರಿಯೆಯ ಎಲ್ಲಾ ಹಂತಗಳಿಗೆ ಅವಶ್ಯಕವಾಗಿರುತ್ತದೆ. ಆನ್–ಲೈನ್ ಮುಖಾಂತರ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ದಿನಾಂಕ 02.08.2010 ರಂದು ಬೆಳಿಗ್ಗೆ 10–00 ಗಂಟೆಯಿಂದ ದಿನಾಂಕ 11.08.2010 ರಂದು ಮಧ್ಯಾಹ್ನ 14–00 ಗಂಟೆಯವರೆಗೆ ಸಲ್ಲಿಸತಕ್ಕದ್ದು. ಪರೀಕ್ಷಾ ಶುಲ್ಕವನ್ನು ನಗದು ರೂಪದಲ್ಲಿ ಪಾವತಿಸುವವರು ಬ್ಯಾಂಕ್‌ನ ಕಛೇರಿಯ ವೇಳೆಯಲ್ಲಿ ಮಾತ್ರ ಪಾವತಿಸತಕ್ಕದ್ದು. ನಿಗಧಿತ ಶುಲ್ಕವನ್ನು ಪಾವತಿಸಿದ ನಂತರ ಅಭ್ಯರ್ಥಿಯ ಅರ್ಜಿಯು ಅರ್ಹಗೊಂಡಿದೆಯೇ ಇಲ್ಲವೇ ಎಂಬುದನ್ನು ಖಾತರಿಪಡಿಸಿಕೊಳ್ಳಲು ಒಂದು ದಿನದ ನಂತರ ಇಂಟರ್‌ನೆಟ್‌ನ್ನು ವೀಕ್ಷಿಸಬೇಕು. ಅರ್ಹಗೊಳ್ಳದಿದ್ದಲ್ಲಿ ಶುಲ್ಕ ಪಾವತಿಸಿದ ಬ್ಯಾಂಕ್‌ನ್ನು ಸಂಪರ್ಕಿಸತಕ್ಕದ್ದು ಅಥವಾ ಈ ದೂರವಾಣಿ ಸಂಖ್ಯೆ. 25559483/ 25559484/ 7259282112 ಗೆ ಸಂರ್ಪಕಿಸಬೇಕು.

**ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ಮುನ್ನ ನೇಮಕಾತಿ ಪ್ರಕ್ರಿಯೆಗೆ ಸಂಬಂಧಿಸಿದಂತೆ ಅರ್ಹತಾ ಷರತ್ತು ಹಾಗೂ ನಿಬಂಧನೆಗಳನ್ನು ಮತ್ತು ಇತರೆ ಸಂಪೂರ್ಣ ಮಾಹಿತಿಗಳನ್ನು ತಿಳಿದು ಕೊಳ್ಳಲು ನೇಮಕಾತಿಗೆ ಸಂಬಂಧಿಸಿದಂತೆ ನೇಮಕಾತಿ ಸಮಿತಿಯು ಈಗಾಗಲೇ ಪ್ರಕಟಿಸಲಾದ ಅಧಿಸೂಚನೆ ಸಂಖ್ಯೆ: 31/ನೇಮಕಾತಿ/2010–11, ದಿನಾಂಕ: 13.04.2010ನ್ನು ಜಾಗರೂಕತೆಯಿಂದ ಓದಿ ಅರ್ಜಿ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಮೇಲಿನ ಹುದ್ದೆಗಳಿಗೆ ಕೊನೆಯ ದಿನಾಂಕ (Cutoff Date) 11.08.2010 ಅನ್ನು ನಿಗಧಿ ಪಡಿಸಲಾಗಿದೆ. ಇತರೆ ಷರತ್ತು ಹಾಗೂ ನಿಬಂಧನೆಗಳಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ. ಆದ್ದರಿಂದ ಅಭ್ಯರ್ಥಿಗಳು 11.08.2010 ದಿನಾಂಕವನ್ನು ಗಮನದಲ್ಲಿಟ್ಟುಕೊಂಡು ಎಲ್ಲಾ ದಾಖಲಾತಿಗಳನ್ನು ಅಂದರೆ ಎಸ್.ಎಸ್.ಎಲ್.ಸಿ. ಅಂಕ ಪಟ್ಟಿ, ವಿದ್ಯಾರ್ಹತೆಗೆ ಸಂಬಂಧಪಟ್ಟಂತೆ ಪ್ರಮಾಣ ಪತ್ರ, ಜಾತಿ ಮತ್ತು ಇತರೆ ಮೀಸಲಾತಿಗೆ ಸಂಬಂಧಿಸಿದಂತೆ ಪ್ರಮಾಣ ಪತ್ರಗಳನ್ನು ಸದರಿ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದೆಂದು ತಿಳಿಸಲಾಗಿದೆ.**

ರಾಮನಗರ ಜಿಲ್ಲೆ ಮತ್ತು ಮಂಗಳೂರು ನಗರಕ್ಕೆ ಮೇಲಿನ ಖಾಲಿ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲಾಗುತ್ತಿರುವುದರಿಂದ ಖಾಲಿ ಹುದ್ದೆಗಳ ವಿವರ ಈ ಕೆಳಕಂಡಂತಿರುತ್ತದೆ.

| | | | |
|---|---|---|---|
| i) | ನಾಗರಿಕ ಪೊಲೀಸ್ ಕಾನ್ಸ್‌ಟೇಬಲ್ | – | 3761 ಹುದ್ದೆಗಳು |
| ii) | ಮಹಿಳಾ ಪೊಲೀಸ್ ಕಾನ್ಸ್‌ಟೇಬಲ್ | – | 422 ಹುದ್ದೆಗಳು |
| iii) | ಪೊಲೀಸ್ ಕಾನ್ಸ್‌ಟೇಬಲ್ (ಎಫ್.ಪಿ.ಬಿ) | – | 36 ಹುದ್ದೆಗಳು |
| iv) | ಮಹಿಳಾ ಪೊಲೀಸ್ ಕಾನ್ಸ್‌ಟೇಬಲ್ (ಎಫ್.ಪಿ.ಬಿ) | – | 04 ಹುದ್ದೆಗಳು |
| v) | ಪೊಲೀಸ್ ಕಾನ್ಸ್‌ಟೇಬಲ್ (ವೈರ್‌ಲೆಸ್) | – | 107 ಹುದ್ದೆಗಳು |
| vi) | ಮಹಿಳಾ ಪೊಲೀಸ್ ಕಾನ್ಸ್‌ಟೇಬಲ್ (ವೈರ್‌ಲೆಸ್) | – | 12 ಹುದ್ದೆಗಳು |
| | **ಒಟ್ಟು** | **–** | **4342 ಹುದ್ದೆಗಳು** |

ಮೇಲೆ ನಮೂದಿಸಿರುವ ಖಾಲಿ ಹುದ್ದೆಗಳ ಸಂಖ್ಯೆ ತಾತ್ಕಾಲಿಕವಾಗಿದ್ದು, ಅವಶ್ಯಕತೆ ಹಾಗೂ ಸಂದರ್ಭಕ್ಕೆ ಅನುಗುಣವಾಗಿ ಬದಲಾವಣೆ ಮಾಡಲಾಗುವುದು.

ಟಿಪ್ಪಣಿ:– ಅಭ್ಯರ್ಥಿಗಳು ಸಿಪಿಸಿ, ಮಪಿಸಿ, ಪಿಸಿ(ಎಫ್.ಪಿ.ಬಿ) ಮತ್ತು ಪಿಸಿ(ವೈರ್‌ಲೆಸ್)–2010 ನೇಮಕಾತಿಗೆ ಸಂಬಂಧಿಸಿದಂತೆ ಯಾವುದಾದರು ಸಂದೇಹ / ಸಂಶಯಗಳಿದ್ದಲ್ಲಿ ನೇಮಕಾತಿ ಸಹಾಯವಾಣಿ ಸಂಖ್ಯೆ. 080–22943346 ನ್ನು ಸಂಪರ್ಕಿಸಿ ಪ್ರಶ್ನೆಗಳನ್ನು ಸ್ಪಷ್ಟ ಪಡಿಸಿಕೊಳ್ಳಬಹುದು. ಈ ಸಹಾಯವಾಣಿ ದಿನಾಂಕ 02.08.2010 ರಿಂದ ಪ್ರತಿದಿನ ಬೆಳಿಗ್ಗೆ 8–00 ರಿಂದ ಸಾಯಂಕಾಲ 8–00 ಗಂಟೆಯವರೆಗೆ ಲಭ್ಯವಿರುತ್ತದೆ. ಅಲ್ಲದೆ ಮೇಲಿಂದ ಮೇಲೆ ನೇಮಕಾತಿಗೆ ಸಂಬಂಧಪಟ್ಟಂತೆ ಬರುವ ಸಾಮಾನ್ಯ ಪ್ರಶ್ನೆಗಳಿಗೆ (Frequenty Asked Questions - FAQ) ಉತ್ತರವನ್ನು www.ksp.gov.in ಪೊಲೀಸ್ ವೆಬ್‌ಸೈಟ್‌ನಲ್ಲಿ ನೋಡಬಹುದು.

ಸಹಿ/–
ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್,
ನೇಮಕಾತಿ ಮತ್ತು ತರಬೇತಿ ಹಾಗೂ ಸಮನ್ವಯಾಧಿಕಾರಿ,
ಪೊಲೀಸ್ ಕಾನ್ಸ್‌ಟೇಬಲ್ ನೇಮಕಾತಿ ಸಮಿತಿ,
ಕಾರ್ಲ್‌ಟನ್ ಭವನ, ಅರಮನೆ ರಸ್ತೆ,
ಬೆಂಗಳೂರು–560 001.

**ವಿಶೇಷ ಪತ್ರಿಕೆ**

| | | |
|---|---|---|
| ಭಾಗ – IV-A | ಬೆಂಗಳೂರು, ಬುಧವಾರ, ಜುಲೈ ೨೮, ೨೦೧೦ (ಶ್ರಾವಣ ೬, ಶಕ ವರ್ಷ ೧೯೩೨) | ನಂ. ೮೮೦ |

**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 56 ಶಾಸನ 2009, ಬೆಂಗಳೂರು, ದಿನಾಂಕ: 28ನೇ ಜುಲೈ, 2010**

ಅಲಿಯನ್ಸ್ ವಿಶ್ವವಿದ್ಯಾಲಯ ವಿಧೇಯಕ, 2010 ಕ್ಕೆ 2010ರ ಜುಲೈ ತಿಂಗಳ ಇಪ್ಪತ್ತ ಎರಡನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2010ರ ಕರ್ನಾಟಕ ಅಧಿನಿಯಮ ಸಂಖ್ಯೆ: 34 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2010ರ ಕರ್ನಾಟಕ ಅಧಿನಿಯಮ ಸಂಖ್ಯೆ 34**

(2010ರ ಜುಲೈ ಇಪ್ಪತ್ತ ಎಂಟನೇ ದಿನಾಂಕದಂದು ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

**ಅಲಿಯನ್ಸ್ ವಿಶ್ವವಿದ್ಯಾಲಯ ಅಧಿನಿಯಮ, 2010**

(2010ರ ಜುಲೈ ಇಪ್ಪತ್ತ ಎರಡನೇ ದಿನಾಂಕದಂದು ರಾಜ್ಯಪಾಲರ ಅನುಮತಿಯನ್ನು ಪಡೆಯಲಾಗಿದೆ)

ಶಿಕ್ಷಣ, ಸಂಶೋಧನೆ ಮತ್ತು ಸಮುದಾಯ ಸೇವಾ ಚಟುವಟಿಕೆಗಳಿಗೆ ಸಂಬಂಧಪಡುವಷ್ಟರ ಮಟ್ಟಿಗೆ ಜಗತ್ತಿನ ಯಾವುದೇ ವಿಶ್ವವಿದ್ಯಾಲಯದೊಂದಿಗೆ ಹೋಲಿಸಬಹುದಾದ ಜಾಗತಿಕ ಗುಣಮಟ್ಟದ ಒಂದು ವಿಶ್ವವಿದ್ಯಾಲಯವನ್ನು ಕರ್ನಾಟಕ ರಾಜ್ಯದಲ್ಲಿ ಖಾಸಗಿ ವಲಯದಲ್ಲಿ ಸ್ಥಾಪಿಸಲು ಮತ್ತು ನಿಗಮನಗೊಳಿಸಲು ಒಂದು ಅಧಿನಿಯಮ.

ಎಲ್ಲರಿಗೂ ಉತ್ತಮ ಗುಣಮಟ್ಟದ ಶಿಕ್ಷಣ ಲಭ್ಯವಾಗುವಂತೆ ಮಾಡುವ ಮೂಲಕ ಮತ್ತು ತ್ವರಿತವಾಗಿ ಜಾಗತೀಕರಣಗೊಳ್ಳುತ್ತಿರುವ ಈ ಯುಗದಲ್ಲಿ, ಹೊಸ ಮಾನದಂಡಗಳನ್ನು ರೂಪಿಸಲು ಮತ್ತು ಇಲ್ಲಿ ಇನ್ನು ಮುಂದೆ ಕಂಡುಬರುವ ಕಾರಣಗಳಿಗಾಗಿ ಅಮೂಲ್ಯವಾದ ಜ್ಞಾನ ಪ್ರಸಾರವನ್ನು ಸಾಕಾರಗೊಳಿಸಲು, ಕರ್ನಾಟಕ ರಾಜ್ಯದಲ್ಲಿ ಖಾಸಗಿ ವಲಯದಲ್ಲಿ ಜಾಗತಿಕ ಗುಣಮಟ್ಟದ ವಿಶ್ವವಿದ್ಯಾಲಯವನ್ನು ಸ್ಥಾಪಿಸುವುದು ಮತ್ತು ನಿಗಮನಗೊಳಿಸುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೊಂದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**ಅಧ್ಯಾಯ – I**

**ಪ್ರಾರಂಭಿಕ**

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಅಲಿಯನ್ಸ್ ವಿಶ್ವವಿದ್ಯಾಲಯ ಅಧಿನಿಯಮ, 2010 ಎಂದು ಕರೆಯತಕ್ಕದ್ದು.

(2) ಇದು ಇಡೀ ಕರ್ನಾಟಕ ರಾಜ್ಯಕ್ಕೆ ವ್ಯಾಪ್ತವಾಗತಕ್ಕದ್ದು.

(3) ಇದು ರಾಜ್ಯ ಸರ್ಕಾರವು ರಾಜ್ಯ ಪತ್ರದಲ್ಲಿ ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) "ಪ್ರಶಿಕ್ಷಣ ಪರಿಷತ್ತು (ಅಕೆಡೆಮಿಕ್ ಕೌನ್ಸಿಲ್)" ಎಂದರೆ, 25ನೇ ಪ್ರಕರಣದಡಿಯಲ್ಲಿ ನಿರ್ದಿಷ್ಟಪಡಿಸಿರುವ ವಿಶ್ವವಿದ್ಯಾಲಯದ ಪ್ರಶಿಕ್ಷಣ ಪರಿಷತ್ತು;

(ಬಿ) "ಕಾರ್ಯಸೂಚಿ ವಿಷಯಗಳು", ಎಂದರೆ, ಶಾಸನಗಳಲ್ಲಿ ಹೆಸರಿಸಬಹುದಾದ ಮತ್ತು ಒಂದು ಸಭೆಯಲ್ಲಿ ಆ ವಿಷಯಗಳನ್ನು ಮತ್ತು ಕಲಾಪಗಳನ್ನು ಅನುಮೋದಿಸಬಹುದೆಂದು ತಮ್ಮ ಸಮ್ಮತಿ ಸೂಚಿಸಿ ಕುಲಾಧಿಪತಿಯವರು ಮುಂಚಿತವಾಗಿಯೇ ಲಿಖಿತ ಅನುಮೋದನೆಯನ್ನು ಕೊಟ್ಟಿದ್ದಾಗ ಮಾತ್ರವೇ ಸಂದರ್ಭಾನುಸಾರ ಪ್ರಬಂಧಕರ ಮಂಡಳಿ ಅಥವಾ ಆಡಳಿತ ಮಂಡಳಿಯು ಕಾರ್ಯಸೂಚಿಯಲ್ಲಿ ಸೇರಿಸಬಹುದಾದ ಅಥವಾ ಚರ್ಚೆಗೆ ತೆಗೆದುಕೊಂಡು ನಿರ್ಣಯವನ್ನು ಕೊಡಬಹುದಾದ ಎಲ್ಲಾ ವಿಷಯಗಳು ಮತ್ತು ಕಲಾಪಗಳು;

(ಸಿ) "ಪ್ರಬಂಧಕರ ಮಂಡಳಿ" ಎಂದರೆ, 23ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವ ವಿಶ್ವವಿದ್ಯಾಲಯದ ಪ್ರಬಂಧಕರ ಮಂಡಳಿ;

(ಡಿ) "ಆಡಳಿತ ಮಂಡಳಿ" ಎಂದರೆ, 24ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವ ವಿಶ್ವವಿದ್ಯಾಲಯದ ಆಡಳಿತ ಮಂಡಳಿ;

(ಇ) "ಕುಲಾಧಿಪತಿ", "ಕುಲಪತಿ", ಮತ್ತು "ಸಹ–ಕುಲಪತಿ" ಎಂದರೆ, ಅನುಕ್ರಮವಾಗಿ ವಿಶ್ವವಿದ್ಯಾಲಯದ ಕುಲಾಧಿಪತಿ, ಕುಲಪತಿ ಮತ್ತು ಸಹ–ಕುಲಪತಿ;

(ಎಫ್) "ಕ್ಯಾಂಪಸ್" ಎಂದರೆ, ಅದು ಎಲ್ಲಾದರೂ ಇರಲಿ ವಿಶ್ವವಿದ್ಯಾಲಯವು ಸ್ಥಾಪಿಸಿದ, ನಿರ್ವಹಿಸಿದ ಅಥವಾ ಮಾನ್ಯತೆ ನೀಡಿದ ಒಂದು ಕ್ಯಾಂಪಸ್;

(ಜಿ) "ಸಮಿತಿಗಳು" ಎಂದರೆ, ಸಂದರ್ಭಾನುಸಾರ ವಿಶ್ವವಿದ್ಯಾಲಯದ ವಿವಿಧ ಕಾರ್ಯಕರ್ತರು ರಚಿಸಿರುವ ಸಮಿತಿಗಳು ಮತ್ತು ಅದರಲ್ಲಿ ನಾಮನಿರ್ದೇಶನ ಸಮಿತಿ, ಹಣಕಾಸು ಸಮಿತಿ, ದೂರಶಿಕ್ಷಣ ಸಮಿತಿ ಮತ್ತು ಇತರ ಯಾವುವೇ ಸಮಿತಿಗಳು ಒಳಗೊಳ್ಳುತ್ತವೆ;

(ಎಚ್) "ಕಂಪನಿ" ಎಂದರೆ, ಒಂದು ಕಂಪೆನಿಯಾಗಿರುವ ಮತ್ತು ಕಂಪೆನಿಗಳ ಅಧಿನಿಯಮ, 1956ರ 25ನೇ ಪ್ರಕರಣದ ಮೇರೆಗೆ ನೋಂದಾಯಿತವಾಗಿರುವ ಅಲಿಯನ್ಸ್ ಬಿಸಿನೆಸ್ ಸ್ಕೂಲ್ ಪ್ರೈವೇಟ್ ಲಿಮಿಟೆಡ್ ಅಥವಾ ಕಂಪೆನಿಗಳ ಅಧಿನಿಯಮ, 1956ರ 25ನೇ ಪ್ರಕರಣದ ಮೇರೆಗೆ ಪ್ರವರ್ತಕರು ರೂಪಿಸಿದ ಮತ್ತು ನೋಂದಾಯಿಸಿದ ಯಾವುದೇ ಇತರ ಕಂಪೆನಿ;

(ಐ) "ಘಟಕ ಕಾಲೇಜು" ಎಂದರೆ, ವಿಶ್ವವಿದ್ಯಾಲಯವು ನಿರ್ವಹಿಸುತ್ತಿರುವ ಒಂದು ಕಾಲೇಜು ಅಥವಾ ಸಂಸ್ಥೆ;

(ಜೆ) "ದೂರಶಿಕ್ಷಣ" ಎಂದರೆ, ದೃಶ್ಯ ಸಂಪರ್ಕ, ಧ್ವನಿ ಸಂಪರ್ಕ, ಗಣಕಯಂತ್ರ, ಬಹುಮಾಧ್ಯಮ (ಮಲ್ಟಿ ಮಿಡಿಯ) ಪ್ರಸಾರ, ದೂರದರ್ಶನ ಪ್ರಸಾರ (ಟೆಲಿಕ್ಯಾಸ್ಟ್), ತಂತ್ರಜ್ಞಾನಗಳು ಮತ್ತು ಸಂಪರ್ಕಸಾಧನಗಳನ್ನು ಬಳಸಿಕೊಂಡು, ಒಂದು ತರಗತಿ, ಕಟ್ಟಡ ಅಥವಾ ನಿವೇಶನದಿಂದ ದೂರದಲ್ಲಿರುವ ಬೇರೊಂದು ತರಗತಿ, ಕಟ್ಟಡ ಅಥವಾ ನಿವೇಶನದಲ್ಲಿರುವವರಿಗೆ ಶಿಕ್ಷಣವನ್ನು ನೀಡುವ ಪ್ರಕ್ರಿಯೆ ಮತ್ತು ಇದು ಅಂಚೆ ಶಿಕ್ಷಣ, ವಿಚಾರಗೋಷ್ಠಿ, ಸಂಪರ್ಕ ಕಾರ್ಯಕ್ರಮ ಅಥವಾ ಅಂಥ ವಿಧಾನಗಳ ಯಾವುದೇ ಎರಡು ಅಥವಾ ಹೆಚ್ಚಿನ ಸಂಯೋಜನೆಗಳು ಮುಂತಾದವುಗಳನ್ನು ಒಳಗೊಳ್ಳುತ್ತದೆ;

(ಕೆ) "ದೂರ ಶಿಕ್ಷಣ ಸಮಿತಿ" ಎಂದರೆ, 27ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವಂತೆ ವಿಶ್ವವಿದ್ಯಾಲಯದ ದೂರ ಶಿಕ್ಷಣ ಸಮಿತಿ;

(ಎಲ್) "ಹಣಕಾಸು ಸಮಿತಿ" ಎಂದರೆ, 28ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವಂತೆ ವಿಶ್ವವಿದ್ಯಾಲಯದ ಹಣಕಾಸು ಸಮಿತಿ;

(ಎಂ) "ಸರ್ಕಾರ" ಎಂದರೆ, ಕರ್ನಾಟಕ ಸರ್ಕಾರ;

(ಎನ್) "ರಾಷ್ಟ್ರೀಯ ಅಧಿಮಾನ್ಯತಾ ಸಂಸ್ಥೆಗಳು" ಎಂದರೆ, ವಿಶ್ವವಿದ್ಯಾಲಯ ಅನುದಾನ ಆಯೋಗ, ಅಖಿಲ ಭಾರತ ತಾಂತ್ರಿಕ ಶಿಕ್ಷಣಪರಿಷತ್ತು, ಭಾರತೀಯ ವೈದ್ಯಕೀಯ ಪರಿಷತ್ತು, ಭಾರತೀಯ ಔಷಧ ವಿಜ್ಞಾನ ಪರಿಷತ್ತು, ಭಾರತೀಯ ಕೃಷಿ ಸಂಶೋಧನಾ ಪರಿಷತ್ತು, ರಾಷ್ಟ್ರೀಯ ಮೌಲ್ಯಮಾಪನ ಮತ್ತು ಅಧಿಮಾನ್ಯತಾ ಪರಿಷತ್ತು, ರಾಷ್ಟ್ರೀಯ ಬೋಧಕ ಶಿಕ್ಷಣ ಪರಿಷತ್ತು, ದೂರಶಿಕ್ಷಣ ಪರಿಷತ್ತು, ಭಾರತೀಯ ವೈಜ್ಞಾನಿಕ ಮತ್ತು ಸಂಶೋಧನಾ ಪರಿಷತ್ತು ಮುಂತಾದವುಗಳಂಥ ಉನ್ನತ ಶಿಕ್ಷಣದಲ್ಲಿ ಗುಣಮಟ್ಟದ ಶಿಕ್ಷಣ ದೊರೆಯುವಂತೆ ನೋಡಿಕೊಳ್ಳುವುದಕ್ಕಾಗಿ ಪ್ರಮಾಣಕಗಳು ಮತ್ತು ಷರತ್ತುಗಳನ್ನು ವಿಧಿಸುವುದಕ್ಕಾಗಿ, ಕೇಂದ್ರ ಸರ್ಕಾರವು ಸ್ಥಾಪಿಸಿರುವ ಒಂದು ಸಂಸ್ಥೆ ಮತ್ತು ಇದರಲ್ಲಿ ಸರ್ಕಾರವೂ ಸೇರಿರುತ್ತದೆ;

(ಒ) "ನಿಯಮಿಸಲಾದುದು" ಎಂದರೆ, ಈ ಅಧಿನಿಯಮದಡಿಯಲ್ಲಿ ರಚಿಸಲಾದ ನಿಯಮಗಳ ಮೂಲಕ ರಾಜ್ಯ ಸರ್ಕಾರದಿಂದ ನಿಯಮಿಸಲಾದುದು;

(ಪಿ) "ಒಂದು ಘಟಕ ಕಾಲೇಜಿಗೆ ಸಂಬಂಧಪಟ್ಟಂತೆ ಪ್ರಾಂಶುಪಾಲರು" ಎಂದರೆ, ಘಟಕ ಕಾಲೇಜಿನ ಮುಖ್ಯಸ್ಥರು ಮತ್ತು ಪ್ರಾಂಶುಪಾಲರು ನೇಮಕವಾಗಿರದಿದ್ದಲ್ಲಿ ಅಥವಾ ನೇಮಕವಾದ ಪ್ರಾಂಶುಪಾಲರ ಗೈರುಹಾಜರಿಯಲ್ಲಿ, ಪ್ರಾಂಶುಪಾಲರಾಗಿ ಕರ್ತವ್ಯ ನಿರ್ವಹಿಸಲು ತಾತ್ಕಾಲಿಕವಾಗಿ ನೇಮಕಗೊಂಡಿರುವ ಉಪಪ್ರಾಂಶುಪಾಲರು ಅಥವಾ ಇತರ ಯಾವೊಬ್ಬ ವ್ಯಕ್ತಿಯೂ ಇದರಲ್ಲಿ ಒಳಗೊಳ್ಳುತ್ತಾರೆ;

(ಕ್ಯೂ) "ಕುಲಸಚಿವರು" ಎಂದರೆ, ವಿಶ್ವವಿದ್ಯಾಲಯದ ಕುಲಸಚಿವರು;

(ಆರ್) "ಪ್ರಾದೇಶಿಕ ಕೇಂದ್ರ" ಎಂದರೆ, ಯಾವುದೇ ಪ್ರದೇಶದಲ್ಲಿನ ಅಧ್ಯಯನ ಕೇಂದ್ರಗಳ ಕಾರ್ಯವನ್ನು ಸಮನ್ವಯಗೊಳಿಸುವ ಮತ್ತು ಮೇಲ್ವಿಚಾರಣೆ ಮಾಡುವ ಉದ್ದೇಶಕ್ಕಾಗಿ ಮತ್ತು ಅಂಥ ಕೇಂದ್ರಕ್ಕೆ ಆಡಳಿತ

ಮಂಡಳಿಯು ವಹಿಸಿಕೊಡಬಹುದಾದ ಇತರ ಕರ್ತವ್ಯಗಳನ್ನು ನೆರವೇರಿಸುವುದಕ್ಕಾಗಿ ವಿಶ್ವವಿದ್ಯಾಲಯವು ಸ್ಥಾಪಿಸಿದ ಅಥವಾ ನಿರ್ವಹಿಸಿಕೊಂಡುಬರುವ ಒಂದು ಕೇಂದ್ರ;

(ಎಸ್) ಈ ಅಧಿನಿಯಮಕ್ಕೆ ಸಂಬಂಧಿಸಿದಂತೆ "ಪ್ರಾಯೋಜಕ ಪ್ರಾಧಿಕಾರ" ಅಥವಾ "ಪ್ರಾಯೋಜಕ ಸಂಸ್ಥೆ" ಎಂದರೆ, ಕಂಪೆನಿ;

(ಟಿ) "ರಾಜ್ಯ" ಎಂದರೆ, ಕರ್ನಾಟಕ ರಾಜ್ಯ;

(ಯು) "ಶಾಸನಗಳು" ಮತ್ತು "ವಿನಿಯಮಗಳು" ಎಂದರೆ, ಅನುಕ್ರಮವಾಗಿ ವಿಶ್ವವಿದ್ಯಾಲಯದ ಶಾಸನಗಳು ಮತ್ತು ವಿನಿಯಮಗಳು;

(ವಿ) "ಅಧ್ಯಯನ ಕೇಂದ್ರ" ಎಂದರೆ, ವಿದ್ಯಾರ್ಥಿಗಳಿಗೆ ಅಗತ್ಯವಾದ ಬುದ್ಧಿವಾದ, ಸಲಹೆಗಳನ್ನು ನೀಡುವ ಅಥವಾ ಇತರ ಯಾವುದೇ ನೆರವನ್ನು ನೀಡುವ ಉದ್ದೇಶಕ್ಕಾಗಿ ವಿಶ್ವವಿದ್ಯಾಲಯವು ಸ್ಥಾಪಿಸಿದ, ನಿರ್ವಹಿಸಿಕೊಂಡುಬಂದ ಅಥವಾ ಮಾನ್ಯತೆ ನೀಡಿದ ಒಂದು ಕೇಂದ್ರ;

(ಡಬ್ಲ್ಯೂ) "ಅಧ್ಯಾಪಕರು" ಎಂದರೆ, ಒಬ್ಬ ಪ್ರತಿಷ್ಠಿತ ಪ್ರಾಧ್ಯಾಪಕರು, ಪ್ರಾಧ್ಯಾಪಕರು, ಸಹಪ್ರಾಧ್ಯಾಪಕರು, ಸಹಾಯಕ ಪ್ರಾಧ್ಯಾಪಕರು, ಸಹ-ಸಂಶೋಧಕರು ಅಥವಾ ವಿಶ್ವವಿದ್ಯಾಲಯದಲ್ಲಿ ಅಥವಾ ಒಂದು ಘಟಕ ಕಾಲೇಜಿನಲ್ಲಿ ಶಿಕ್ಷಣ ನೀಡುವುದಕ್ಕೆ ಅಥವಾ ಸಂಶೋಧನೆ ನಡೆಸುವುದಕ್ಕೆ ಅಥವಾ ಸಂಶೋಧನೆಗೆ ಮಾರ್ಗದರ್ಶನ ನೀಡುವುದಕ್ಕೆ ನೇಮಕವಾಗಬಹುದಾದಂಥ ಯಾವೊಬ್ಬ ವ್ಯಕ್ತಿ ಹಾಗೂ ಅವರನ್ನು ಒಳಗೊಳ್ಳುತ್ತದೆ ಮತ್ತು ವಿಶ್ವವಿದ್ಯಾಲಯ ಅನುದಾನ ಆಯೋಗವು ನಿಯಮಿಸಿದ ಗುಣಮಟ್ಟಗಳಿಗೆ ಅನುಸಾರವಾಗಿ ಇರುವ ಘಟಕ ಕಾಲೇಜಿನ ಪ್ರಾಂಶುಪಾಲರು ಇದರಲ್ಲಿ ಒಳಗೊಳ್ಳುತ್ತಾರೆ;

(ಎಕ್ಸ್) "ವಿಶ್ವವಿದ್ಯಾಲಯ ಅನುದಾನ ಆಯೋಗ" ಎಂದರೆ, ವಿಶ್ವವಿದ್ಯಾಲಯ ಅನುದಾನ ಆಯೋಗ ಅಧಿನಿಯಮ, 1956ರ (1956ರ ಕೇಂದ್ರ ಅಧಿನಿಯಮ 3) 4ನೇ ಪ್ರಕರಣದಡಿಯಲ್ಲಿ ಸ್ಥಾಪಿತವಾದ ಆಯೋಗ;

(ವೈ) "ವಿಶ್ವವಿದ್ಯಾಲಯ" ಎಂದರೆ, 4ನೇ ಪ್ರಕರಣದಡಿಯಲ್ಲಿ ಸ್ಥಾಪಿಸಿ ನಿಗಮಿತಗೊಳಿಸಲಾದ ಅಲಿಯನ್ಸ್ ವಿಶ್ವವಿದ್ಯಾಲಯ;

(ಜೆಡ್) "ಸಂದರ್ಶಕರು" ಮತ್ತು "ಸಹ ಸಂದರ್ಶಕರು" ಎಂದರೆ, 13ನೇ ಮತ್ತು 14ನೇ ಪ್ರಕರಣಗಳಲ್ಲಿ ನಿರ್ದಿಷ್ಟಪಡಿಸಿದ ವಿಶ್ವವಿದ್ಯಾಲಯದ ಸಂದರ್ಶಕರು ಮತ್ತು ಸಹಸಂದರ್ಶಕರು.

## ಅಧ್ಯಾಯ – II

## ವಿಶ್ವವಿದ್ಯಾಲಯ ಮತ್ತು ಪ್ರಾಯೋಜಕ ಸಂಸ್ಥೆ

**3. ವಿಶ್ವವಿದ್ಯಾಲಯದ ಸ್ಥಾಪನೆಗೆ ಪ್ರಸ್ತಾವ.–** (1) ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು ಮತ್ತು ಅದಕ್ಕನುಸಾರವಾಗಿ ವಿಶ್ವವಿದ್ಯಾಲಯವನ್ನು ಸ್ಥಾಪಿಸುವ ಹಕ್ಕನ್ನು ಕಂಪನಿಯು ಹೊಂದಿರತಕ್ಕದ್ದು.

(2) ಕಂಪನಿಯು (ಪ್ರವರ್ತಕರು ಪರಿಶಿಷ್ಟ ಪಂಗಡ ಸಮುದಾಯಕ್ಕೆ ಸೇರಿರತಕ್ಕದ್ದು) ರಾಜ್ಯ ಸರ್ಕಾರಕ್ಕೆ ವಿಶ್ವವಿದ್ಯಾಲಯವನ್ನು ಸ್ಥಾಪಿಸುವ ಪ್ರಸ್ತಾವವನ್ನು ಸಲ್ಲಿಸತಕ್ಕದ್ದು.

(3) ಪ್ರಸ್ತಾವವು ಈ ಮುಂದಿನ ವಿವರಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಕಂಪನಿಯ ವಿವರಗಳೊಂದಿಗೆ ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳು;

(ii) ವಿಶ್ವವಿದ್ಯಾಲಯದ ವ್ಯಾಪ್ತಿ ಮತ್ತು ಸ್ಥಾನಮಾನ ಹಾಗೂ ಭೂಮಿಯ ಲಭ್ಯತೆ;

(iii) ಪ್ರಾರಂಭದ ದಿನಾಂಕದಿಂದ ನಿಕಟ ಐದು ಶೈಕ್ಷಣಿಕ ವರ್ಷಗಳ ಅವಧಿಯಲ್ಲಿ ವಿಶ್ವವಿದ್ಯಾಲಯವು ಕೈಗೊಳ್ಳಬೇಕೆಂದಿರುವ ಅಧ್ಯಯನ ಮತ್ತು ಸಂಶೋಧನಾ ಕಾರ್ಯಕ್ರಮಗಳ ಸ್ವರೂಪ ಮತ್ತು ಬಗೆಗಳು;

(iv) ಪ್ರಾರಂಭಿಸಬೇಕೆಂದು ಪ್ರಸ್ತಾಪಿಸಿರುವ ವಿದ್ಯಾ ವಿಭಾಗಗಳು (ಫ್ಯಾಕಲ್ಟಿಗಳು), ಅಧ್ಯಯನ ಕ್ರಮಗಳ ಮತ್ತು ಸಂಶೋಧನೆಗಳ ಸ್ವರೂಪ;

(v) ಕಟ್ಟಡಗಳು, ಸಲಕರಣೆಗಳು ಮತ್ತು ರಚನಾ ಸೌಕರ್ಯಗಳನ್ನು ಒದಗಿಸುವಂಥ ಕ್ಯಾಂಪಸ್ ಅಭಿವೃದ್ಧಿ;

(vi) ಪ್ರಾರಂಭದ ದಿನಾಂಕದ ತರುವಾಯದ ನಿಕಟ ಐದು ಶೈಕ್ಷಣಿಕ ವರ್ಷಗಳ ಅವಧಿಗಾಗಿನ ಬಂಡವಾಳ ವೆಚ್ಚಗಳ ಹಂತಗಳು;

(vii) ಬಾಬುವಾರು ಆವರ್ತಕ ವೆಚ್ಚ, ಆರ್ಥಿಕ ಮೂಲಗಳು ಮತ್ತು ಪ್ರತಿಯೊಬ್ಬ ವಿದ್ಯಾರ್ಥಿಗಾಗಿ ವಹಿಸುವ ಅಂದಾಜು ವೆಚ್ಚ;

(viii) ಸಂಪನ್ಮೂಲ ಸಂಗ್ರಹಣೆಗಾಗಿ ಯೋಜನೆ ಮತ್ತು ಅದಕ್ಕಾಗಿನ ಬಂಡವಾಳ ವೆಚ್ಚ ಮತ್ತು ಪ್ರತಿಯೊಂದು ಮೂಲಕ್ಕೆ ಮರು ಸಂದಾಯ ಮಾಡುವ ರೀತಿ;

(ix) ವಿದ್ಯಾರ್ಥಿಗಳಿಂದ ಶುಲ್ಕ ವಸೂಲಿ ಸಲಹಾ ಸೇವೆ ಮತ್ತು ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳಿಗೆ ಸಂಬಂಧಿಸಿದ ಇತರ ಚಟುವಟಿಕೆಗಳಿಂದ ನಿರೀಕ್ಷಿತ ಆದಾಯಗಳು ಮತ್ತು ಇತರ ನಿರೀಕ್ಷಿತ ಆದಾಯಗಳ ಮೂಲಕ ಆಂತರಿಕವಾಗಿ ನಿಧಿ ಸಂಗ್ರಹಿಸುವ ಯೋಜನೆ;

(x) ಘಟಕವೊಂದಕ್ಕೆ ತಗಲುವ ವೆಚ್ಚ ಆರ್ಥಿಕವಾಗಿ ದುರ್ಬಲವಾದ ವರ್ಗಗಳಿಗೆ ಸೇರಿದ ವಿದ್ಯಾರ್ಥಿಗಳಿಗೆ ಶುಲ್ಕದಲ್ಲಿ ಎಷ್ಟರವರೆಗೆ ರಿಯಾಯಿತಿಗಳನ್ನು ಅಥವಾ ವಿನಾಯತಿಗಳನ್ನು ಫ್ರೀಶಿಪ್, ವಿದ್ಯಾರ್ಥಿ ವೇತನ ನೀಡಲಾಗುವುದು ಎಂಬುದರ ವಿವರಗಳನ್ನು ಮತ್ತು ಅನಿವಾಸಿ ಭಾರತೀಯರಿಗೆ ಅಥವಾ ಭಾರತೀಯ ಮೂಲದ ವ್ಯಕ್ತಿಗಳಿಗೆ ಅಥವಾ ಅನಿವಾಸಿ ಭಾರತೀಯರು ಅಥವಾ ಭಾರತೀಯ ಮೂಲದ ವ್ಯಕ್ತಿಗಳು ಪ್ರಾಯೋಜಿಸಿದ ವಿದ್ಯಾರ್ಥಿಗಳಿಗೆ ಮತ್ತು ಭಾರತವನ್ನುಳಿದು ಇತರ ರಾಷ್ಟ್ರಗಳ ವಿದ್ಯಾರ್ಥಿಗಳಿಗೆ ವಿಧಿಸತಕ್ಕ ಶುಲ್ಕದ ದರಗಳು ಬೇರೆ ಬೇರೆ ಇದ್ದಲ್ಲಿ, ಅವುಗಳನ್ನು ಸೂಚಿಸುವ ಶುಲ್ಕ ರಚನೆಯ ವಿವರಗಳು;

(xi) ಸಂಬಂಧಪಟ್ಟ ವಿದ್ಯಾ ವಿಷಯಗಳಲ್ಲಿ ಎಷ್ಟು ವರ್ಷಗಳ ಅನುಭವ ಮತ್ತು ಪರಿಣಿತಿ ಕಂಪೆನಿಯು ದೊರಕಿಸಿಕೊಡಲಿದೆ ಹಾಗೂ ಅದರ ಹಣಕಾಸಿನ ಸಂಪನ್ಮೂಲಗಳು;

(xii) ವಿಶ್ವವಿದ್ಯಾಲಯದಲ್ಲಿರುವ ವ್ಯಾಸಂಗ ಕ್ರಮಗಳಿಗೆ ಹಿಂದುಳಿದ ಸಮುದಾಯಕ್ಕೆ ಕಾಯ್ದಿರಿಸಿದ ಸೀಟುಗಳೊಡನೆ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವುದಕ್ಕಾಗಿ ಇರುವ ವ್ಯವಸ್ಥೆ;

(xiii) ವಿಶ್ವವಿದ್ಯಾಲಯವು ಸ್ಥಾಪನೆಯಾಗುವುದಕ್ಕೆ ಮುಂಚೆ ನೆರವೇರಿಸಬೇಕೆಂದು ರಾಜ್ಯ ಸರ್ಕಾರವು ಅಗತ್ಯಪಡಿಸಬಹುದಾದಂಥ ಇತರ ಷರತ್ತುಗಳ ನೆರವೇರಿಕೆಯು ಯಾವ ಹಂತದಲ್ಲಿದೆ.

(4) ಸ್ವೀಕೃತವಾದ ಪ್ರಸ್ತಾವಗಳನ್ನು ಪರೀಕ್ಷಿಸುವುದಕ್ಕಾಗಿ ಒಂದು ಪರಿಶೋಧನಾ ಸಮಿತಿಯನ್ನು ರಚಿಸತಕ್ಕದ್ದು ಮತ್ತು ಅದು ರಾಜ್ಯ ಸರ್ಕಾರಕ್ಕೆ ಶಿಫಾರಸ್ಸುಗಳನ್ನು ಮಾಡತಕ್ಕದ್ದು.

**4. ವಿಶ್ವವಿದ್ಯಾಲಯದ ಸ್ಥಾಪನೆ.–** (1) ರಾಜ್ಯ ಸರ್ಕಾರವು, ಪರಿಶೋಧನಾ ಸಮಿತಿಯು ಮಾಡಿದ ಶಿಫಾರಸ್ಸುಗಳನ್ನು ಪರಿಶೀಲಿಸಿದ ತರುವಾಯ ಮತ್ತು ತಾನು ಅವಶ್ಯವೆಂದು ಭಾವಿಸುವಂಥ ವಿಚಾರಣೆಯನ್ನು ನಡೆಸಿದ ತರುವಾಯ, 3ನೇ ಪ್ರಕರಣದ (3)ನೇ ಉಪ–ಪ್ರಕರಣದಲ್ಲಿ ಅಗತ್ಯಪಡಿಸಲಾದ ವಿವರಗಳನ್ನು ಕಂಪೆನಿಯು ಒದಗಿಸಿದೆ ಎಂದು ಅದಕ್ಕೆ ಮನವರಿಕೆಯಾದರೆ, ಅದು 47ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವ ಶಾಶ್ವತ ಶಾಸನಬದ್ಧ ದತ್ತಿ ನಿಧಿಯನ್ನು ಸ್ಥಾಪಿಸಬೇಕೆಂದು ಕಂಪೆನಿಗೆ ನಿರ್ದೇಶಿಸಬಹುದು.

(2) ಶಾಶ್ವತ ಶಾಸನಬದ್ಧ ದತ್ತಿ ನಿಧಿಯ ಸ್ಥಾಪನೆಯ ತರುವಾಯ, ರಾಜ್ಯಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ, ರಾಜ್ಯದಲ್ಲಿ "ಅಲಿಯನ್ಸ್ ವಿಶ್ವವಿದ್ಯಾಲಯ" ಎಂಬ ಹೆಸರಿನ ಒಂದು ವಿಶ್ವವಿದ್ಯಾಲಯವನ್ನು ಸ್ಥಾಪಿಸುವುದಕ್ಕೆ ಮಂಜೂರಾತಿಯನ್ನು ನೀಡಬಹುದು.

(3) ಪ್ರಾಯೋಜಕ ಸಂಸ್ಥೆಯು, ರಾಜ್ಯದಲ್ಲಿ ನಿರ್ಧರಿಸಬಹುದಾದಂಥ ಸ್ಥಳದಲ್ಲಿ ವಿಶ್ವವಿದ್ಯಾಲಯದ ಕೇಂದ್ರಕಾರ್ಯಸ್ಥಾನವು ಇರತಕ್ಕದ್ದು. ವಿಶ್ವವಿದ್ಯಾಲಯವು ತನ್ನ ಕ್ಯಾಂಪಸ್ಸುಗಳನ್ನು ಅಥವಾ ಪ್ರಾದೇಶಿಕ ಕೇಂದ್ರಗಳನ್ನು, ಮತ್ತು ಅಧ್ಯಯನ ಕೇಂದ್ರಗಳನ್ನು, ಭಾರತದಲ್ಲಿ ಅಥವಾ ವಿದೇಶಗಳಲ್ಲಿ, ಆ ಬಗ್ಗೆ ಸಂಬಂಧಪಟ್ಟ ಸರ್ಕಾರಗಳ ಅನುಮತಿಯನ್ನು ಪಡೆದುಕೊಳ್ಳಬೇಕಾಗಿದ್ದಲ್ಲಿ, ಹಾಗೆ ಪಡೆದುಕೊಳ್ಳುವುದಕ್ಕೊಳಪಟ್ಟು, ಹೊಂದಿರತಕ್ಕದ್ದು.

(4) ಹಾಗೆ ಸ್ಥಾಪಿತವಾದ ವಿಶ್ವವಿದ್ಯಾಲಯದಲ್ಲಿ ಇರುವ ಕುಲಾಧಿಪತಿಯವರು, ಕುಲಪತಿಯವರು, ಪ್ರಬಂಧಕ ಮಂಡಳಿಯ ಸದಸ್ಯರುಗಳು, ಆಡಳಿತ ಮಂಡಳಿಯ ಹಾಗೂ ಪ್ರಶಿಕ್ಷಣ ಪರಿಷತ್ತಿನ ಸದಸ್ಯರುಗಳಾಗಿ ತತ್ಕಾಲದಲ್ಲಿ ಹಾಗೆ ಹುದ್ದೆಯನ್ನು ಹೊಂದಿರುವವರು ಇವರೆಲ್ಲರೂ ಕೂಡಿ ಒಂದು ನಿಗಮಿತ ನಿಕಾಯವಾಗಿರತಕ್ಕದ್ದು. ಮತ್ತು ಅದು ವಿಶ್ವವಿದ್ಯಾಲಯದ ಹೆಸರಿನಲ್ಲಿ ದಾವೆ ಹೂಡಬಹುದು ಮತ್ತು ದಾವೆಗೊಳಗಾಗಬಹುದು.

(5) (2)ನೇ ಉಪ–ಪ್ರಕರಣದಡಿಯಲ್ಲಿ ವಿಶ್ವವಿದ್ಯಾಲಯವು ಸ್ಥಾಪನೆಯಾದ ಮೇಲೆ, ವಿಶ್ವವಿದ್ಯಾಲಯದ ಉದ್ದೇಶಕ್ಕಾಗಿ, ವಿಶ್ವವಿದ್ಯಾಲಯವು ಆರ್ಜಿಸಿದ, ರಚಿಸಿದ, ಏರ್ಪಾಟು ಮಾಡಿಕೊಂಡ ಅಥವಾ ಕಟ್ಟಲ್ಪಟ್ಟ ಭೂಮಿ ಮತ್ತಿತರ ಸ್ಥಿರ ಮತ್ತು ಚರ ಆಸ್ತಿಗಳು, ಅವು ಎಲ್ಲೇ ಇರಲಿ, ವಿಶ್ವವಿದ್ಯಾಲಯದಲ್ಲಿ ನಿಹಿತವಾಗಿರತಕ್ಕದ್ದು.

(6) ವಿಶ್ವವಿದ್ಯಾಲಯವು ಹೂಡಿದ ಅಥವಾ ಅದರ ವಿರುದ್ಧ ಹೂಡಲಾದ ಎಲ್ಲಾ ದಾವೆಗಳಲ್ಲಿ ಮತ್ತು ಇತರ ಕಾನೂನು ವ್ಯವಹರಣೆಗಳಲ್ಲಿ, ವಾದ ಪತ್ರಗಳಿಗೆ ಕುಲಸಚಿವರು ಸಹಿ ಮಾಡಿ ಸತ್ಯಾಪನೆ ಮಾಡತಕ್ಕದ್ದು ಮತ್ತು ಅಂಥ ದಾವೆಗಳಲ್ಲಿನ ಮತ್ತು ವ್ಯವಹರಣೆಗಳಲ್ಲಿನ ಎಲ್ಲಾ ಆದೇಶಿಕೆಗಳನ್ನು ಕುಲಸಚಿವರಿಗೆ ನೀಡತಕ್ಕದ್ದು ಮತ್ತು ಅವರಿಗೆ ಜಾರಿ ಮಾಡತಕ್ಕದ್ದು.

(7) ವಿಶ್ವವಿದ್ಯಾಲಯದಲ್ಲಿನ ಭೂಮಿ, ಕಟ್ಟಡ ಮತ್ತು ಇತರ ಆಸ್ತಿಗಳನ್ನು ಇತರ ಯಾವುದೇ ಉದ್ದೇಶಕ್ಕಾಗಿ ಬಳಸತಕ್ಕದ್ದಲ್ಲ.

**5. ಅನುದಾನಗಳು ಮತ್ತು ಹಣಕಾಸು ನೆರವು.–** ವಿಶ್ವವಿದ್ಯಾಲಯವು ಸ್ವಂತ ಧನಮೂಲ ಉಳ್ಳದ್ದಾಗಿರತಕ್ಕದ್ದು ಮತ್ತು ರಾಜ್ಯದಿಂದ ಅಥವಾ ರಾಜ್ಯದ ಒಡೆತನದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ಯಾವುದೇ ಇತರ ಸಂಸ್ಥೆ ಅಥವಾ ನಿಗಮದಿಂದ ಯಾವುದೇ ನಿರ್ವಹಣಾ ಸಹಾಯ ಅನುದಾನ ಅಥವಾ ಯಾವುದೇ ಹಣಕಾಸು ನೆರವನ್ನು ಹಕ್ಕಿನಿಂದ ಕೇಳತಕ್ಕದ್ದಲ್ಲ ಅಥವಾ ಅದನ್ನು ಪಡೆಯಲು ಹಕ್ಕನ್ನು ಹೊಂದಿರತಕ್ಕದ್ದಲ್ಲ:

ಪರಂತು, ರಾಜ್ಯವು,–

(ಎ) ಇತರ ರಾಜ್ಯ ಸರ್ಕಾರದ ಸಂಘಟನೆಗಳಿಗೆ ಹಣಕಾಸು ನೆರವನ್ನು ಒದಗಿಸುತ್ತಿರುವಂಥದ್ದೇ ಸಂಶೋಧನೆ, ಅಭಿವೃದ್ಧಿ ಮತ್ತಿತರ ಚಟುವಟಿಕೆಗಳಿಗೆ; ಅಥವಾ

(ಬಿ) ರಾಜ್ಯ ಸರ್ಕಾರದ ನೆರವನ್ನು ಅವಲಂಬಿಸಿದ ಯಾವುದೇ ನಿರ್ದಿಷ್ಟ ಸಂಶೋಧನೆ ಅಥವಾ ಕಾರ್ಯಕ್ರಮಗಳಿಗಾಗಿ; ಮತ್ತು

(ಸಿ) ರಾಜ್ಯ ಕಾರ್ಯನೀತಿಯ ಬದಲಾವಣೆಗೆ ಒಳಪಟ್ಟು ಅಥವಾ ಅನ್ಯಥಾ ಇದೇ ಬಗೆಯ ವಿಶ್ವವಿದ್ಯಾಲಯಗಳಿಗೆ ಅಥವಾ ಅವುಗಳ ಪ್ರಯೋಜನಕ್ಕಾಗಿ ನೆರವು ಒದಗಿಸಿರುವ ಸಂದರ್ಭಗಳಲ್ಲಿ,

–ಅನುದಾನದ ಮೂಲಕ ಅಥವಾ ಅನ್ಯಥಾ ನೆರವು ನೀಡುವುದೂ ಒಳಗೊಂಡಂತೆ, ಹಣಕಾಸು ಬೆಂಬಲವನ್ನು ಒದಗಿಸಬಹುದು.

**6. ಘಟಕ ಕಾಲೇಜನ್ನು ಸ್ಥಾಪಿಸುವುದಕ್ಕೆ ಅಧಿಕಾರ.–** ವಿಶ್ವವಿದ್ಯಾಲಯವು, ರಾಜ್ಯದಲ್ಲಿ ತನಗೆ ಸೂಕ್ತವೆನಿಸುವಂಥ ಸ್ಥಳಗಳಲ್ಲಿ ಘಟಕ ಕಾಲೇಜುಗಳು, ಪ್ರಾದೇಶಿಕ ಕೇಂದ್ರಗಳು ಮತ್ತು ಅಧ್ಯಯನ ಕೇಂದ್ರಗಳನ್ನು ಹೊಂದಿರಬಹುದು.

**7. ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳು.**–ವಿಶ್ವವಿದ್ಯಾಲಯವು, ತನ್ನ ಮುನ್ನೋಟ, ಗುರಿ ಮತ್ತು ಧ್ಯೇಯೋದ್ದೇಶಗಳನ್ನು ಸಾಧಿಸಲು ಈ ಮುಂದಿನಂತೆ ವಿವಿಧ ಬಗೆಯ ಕಾರ್ಯತಂತ್ರಗಳನ್ನು ಆಯೋಜಿಸತಕ್ಕದ್ದು, ಎಂದರೆ:–

(i) ವ್ಯವಹಾರ ಆಡಳಿತ ಮತ್ತು ವ್ಯವಸ್ಥಾಪನೆ, ಸಾರ್ವಜನಿಕ ನೀತಿ ಮತ್ತು ಆಡಳಿತ, ತಂತ್ರಜ್ಞಾನ, ಆರೋಗ್ಯ ವಿಜ್ಞಾನ, ಪರಿಸರ ಮತ್ತು ಹವಾಮಾನ ಬದಲಾವಣೆ, ಜಾಗತೀಕರಣ ಮತ್ತು ರಾಷ್ಟ್ರ ಸೀಮಾತೀತ ಸಂಬಂಧಗಳೂ ಸೇರಿದಂತೆ ಜೀವನ ವಿಜ್ಞಾನಗಳಂಥ ವಿಷಯಗಳಲ್ಲಿ, ಲಿಂಗ, ಮೂಲವಂಶ, ಜನಾಂಗ, ವಯೋಮಾನ, ಸಾಮಾಜಿಕ ಮತ್ತು ಆರ್ಥಿಕ ಒಕ್ಕೂಟಗಳೂ ಸೇರಿದಂತೆ, ಆದರೆ ಅವುಗಳಿಗೇ ಸೀಮಿತಗೊಳ್ಳದೇ ಇಡೀ ಸಮಾಜದ ಮೇಲೆ ಪರಿಣಾಮ ಬೀರುವ ಅಂಶಗಳಂಥ ವಿವಿಧ ವಿಷಯಗಳಲ್ಲಿ ಬೋಧನೆಯನ್ನು, ಶಿಕ್ಷಣವನ್ನು, ತರಬೇತಿಯನ್ನು ನೀಡುವುದು. ಸಂಶೋಧನೆ, ಅಭಿವೃದ್ಧಿ ಮತ್ತು ಸಮುದಾಯ ಸೇವಾ ಚಟುವಟಿಕೆಯನ್ನು ಕೈಗೊಳ್ಳುವುದು ಮತ್ತು ಸಾಮಾನ್ಯವಾಗಿ ಮಾನವನ ಜೀವನದ ಗುಣಮಟ್ಟವನ್ನು ಸುಧಾರಿಸುವ ಸಾಮರ್ಥ್ಯವುಳ್ಳ ಚಟುವಟಿಕೆಗಳಲ್ಲಿ ತೊಡಗುವುದು;

(ii) ಭಾರತದಲ್ಲಿ ಮತ್ತು ವಿದೇಶಗಳಲ್ಲಿ ರಾಷ್ಟ್ರ ನಿರ್ಮಾಣ ಚಟುವಟಿಕೆಗಳಲ್ಲಿ ತೊಡಗಿರುವ ಬೋಧಕರು, ಶಿಕ್ಷಕರು, ವೃತ್ತಿಗರು, ಆಡಳಿತಗಾರರು ಮತ್ತು ಇತರ ವೃತ್ತಿಪರರಿಗಾಗಿ ಸಾಮರ್ಥ್ಯದಾಯಕವಾದ, ಪರಿಣತಿ ಹೆಚ್ಚಿಸುವಂಥ ಮತ್ತು ಅಭಿವೃದ್ಧಿದಾಯಕವಾದ ಉನ್ನತ ಗುಣಮಟ್ಟದ ತರಬೇತಿಯನ್ನು ರೂಪಿಸುವುದು, ವಿನ್ಯಾಸಗೊಳಿಸುವುದು ಮತ್ತು ನೀಡುವುದು;

(iii) ಸಮಗ್ರ ಜೀವನದ ಗುಣಮಟ್ಟವನ್ನು ಸುಧಾರಿಸಲು ಅನುಕೂಲವಾಗುವಂತೆ ಭಾರತದ ವಿವಿಧ ರಾಜ್ಯಗಳಲ್ಲಿ ಮತ್ತು ವಿದೇಶಗಳಲ್ಲಿ ಸಂಪನ್ಮೂಲ ಕೇಂದ್ರಗಳನ್ನು ರೂಪಿಸುವುದು ಮತ್ತು ಅಭಿವೃದ್ಧಿ ಪಡಿಸುವುದು;

(iv) ಎಲ್ಲಾ ರಾಷ್ಟ್ರಗಳೊಂದಿಗೆ ಇರುವ ಸಂಬಂಧಗಳನ್ನು ಬಲಪಡಿಸಲು ಮತ್ತು ಮನುಕುಲವು ಎದುರಿಸುತ್ತಿರುವ ಅಸಂಖ್ಯಾತ ಸಮಸ್ಯೆಗಳನ್ನು ಸಮಗ್ರತಾ ದೃಷ್ಟಿಯಿಂದ ಅರ್ಥೈಸುವುದನ್ನು ಅಭಿವೃದ್ಧಿಪಡಿಸಲು ಮತ್ತು ಆ ಕುರಿತು ನಿವಾರಣೋಪಾಯಗಳನ್ನು ಸೂಚಿಸಲು ಭಾರತದ ವಿವಿಧ ಸ್ಥಳಗಳಲ್ಲಿ ಮತ್ತು ಇತರ ದೇಶಗಳಲ್ಲಿ ಕ್ಯಾಂಪಸ್‌ಗಳನ್ನು ಮತ್ತು ಅಧ್ಯಯನ ಕೇಂದ್ರಗಳನ್ನು ಸ್ಥಾಪಿಸುವುದು ಮತ್ತು ಅವುಗಳನ್ನು ನಡೆಸುವುದು;

(v) ಮುಂದುವರಿಕೆ ಶಿಕ್ಷಣ ಮತ್ತು ದೂರ ಶಿಕ್ಷಣ ವ್ಯವಸ್ಥೆ ಇಲ್ಲದಿದ್ದರೆ ಶಿಕ್ಷಣ ಪಡೆಯುವುದು ದುರ್ಲಭವೆನಿಸುವ ಬಹುಸಂಖ್ಯಾತ ಜನರನ್ನು ಅರ್ಥಪೂರ್ಣವಾದ ರೀತಿಯಲ್ಲಿ ತಲುಪಲು ಮುಂದುವರಿಕೆ ಶಿಕ್ಷಣ ಮತ್ತು ದೂರ ಶಿಕ್ಷಣ ಕಾರ್ಯಕ್ರಮಗಳನ್ನು ಕಲ್ಪಿಸುವುದು;

(vi) ಮೌಲ್ಯನಿರ್ಧರಣೆಯ ಮತ್ತು ಮೌಲ್ಯಮಾಪನದ ವಿವಿಧ ಆಧುನಿಕ ಸುಸಂಬದ್ಧ ಮತ್ತು ಅಂಗೀಕೃತ ವಿಧಾನಗಳ ಮೂಲಕ ಮಾಡಿದ ಮೌಲ್ಯಮಾಪನದಲ್ಲಿ ಉತ್ತೀರ್ಣರಾಗಿ ಶಿಕ್ಷಣವನ್ನು ಯಶಸ್ವಿಯಾಗಿ ಮುಗಿಸುವವರಿಗೆ ನೀಡಲು ಪದವಿಗಳು, ಡಿಪ್ಲೋಮೋಗಳು, ಪ್ರಮಾಣಪತ್ರಗಳು ಮತ್ತು ಯಶೋಪತ್ರದಂಥ ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಪ್ರಾರಂಭಿಸುವುದು ಮತ್ತು ಅವುಗಳನ್ನು ಪ್ರದಾನ ಮಾಡುವುದು;

(vii) ವಿದ್ಯಾರ್ಥಿಗಳಿಗಾಗಿ, ಬೋಧಕ ವೃಂದದವರಿಗಾಗಿ ಮತ್ತು ಇತರರಿಗಾಗಿ ನಿರ್ದಿಷ್ಟ ಶೈಕ್ಷಣಿಕ ಮತ್ತು ಸಂಶೋಧನಾ ಕಾರ್ಯಕ್ರಮಗಳನ್ನು, ತರಬೇತಿ ಕಾರ್ಯಕ್ರಮಗಳನ್ನು, ಸಮಾಲೋಚಕ ಕಾರ್ಯಗಳ ವಹಿಸುವಿಕೆಯನ್ನು ಮತ್ತು ವಿನಿಮಯ ಕಾರ್ಯಕ್ರಮಗಳನ್ನು ಪರಿಕಲ್ಪಿಸಲು, ವಿನ್ಯಾಸಗೊಳಿಸಲು, ಅಭಿವೃದ್ಧಿಪಡಿಸಲು, ಒಪ್ಪಿಸಲು, ಕೊಡಲು, ಮೌಲ್ಯಮಾಪನ ಮಾಡಲು ಮತ್ತು ಮಾನ್ಯ ಮಾಡಲು, ಭಾರತದಲ್ಲಿ ಮತ್ತು ವಿದೇಶಗಳಲ್ಲಿ ಇತರ ಕಾಲೇಜುಗಳೊಂದಿಗೆ, ವಿಶ್ವವಿದ್ಯಾಲಯಗಳೊಂದಿಗೆ, ಸಂಶೋಧನಾ ಸಂಸ್ಥೆಗಳೊಂದಿಗೆ, ಲಾಭಕಾಂಕ್ಷಿಗಳಲ್ಲದ ಸಂಸ್ಥೆಗಳೊಂದಿಗೆ, ವೃತ್ತಿಪರ ಸಂಸ್ಥೆಗಳೊಂದಿಗೆ ಅಥವಾ ನಿಕಾಯಗಳೊಂದಿಗೆ ಅಥವಾ ಇತರ ಸಂಘಟನೆಗಳೊಂದಿಗೆ ಸಹಯೋಗ ಹೊಂದುವುದು ಮತ್ತು ಸಹಕರಿಸುವುದು;

(viii) ವಿಚಾರಗೋಷ್ಠಿಗಳು, ಕಾರ್ಯಗಾರಗಳು, ಉಪನ್ಯಾಸಮಾಲೆಗಳು, ಚರ್ಚೆಗಳು, ಸಮ್ಮೇಳನಗಳು, ನಿರಂತರ ಶಿಕ್ಷಣ ಕಾರ್ಯಕ್ರಮಗಳು, ಸಮುದಾಯ ಅಭಿವೃದ್ಧಿ ಕಾರ್ಯಕ್ರಮಗಳು, ಪ್ರಕಟಣೆಗಳು ಹಾಗೂ ತರಬೇತಿ ಕಾರ್ಯಕ್ರಮಗಳು ಮತ್ತು ಕ್ರೀಡೆಗಳ ಮೂಲಕ ರಾಷ್ಟ್ರೀಯ ಮತ್ತು ಅಂತರ ರಾಷ್ಟ್ರೀಯ ಮಹತ್ವದ ವಿಷಯಗಳ ಬಗ್ಗೆ ಸಾರ್ವಜನಿಕ ಚರ್ಚೆಗೆ ಉತ್ತೇಜಿಸುವುದು ಮತ್ತು ಬೆಳೆಸುವುದು;

(ix) ವಿಶ್ವಾದ್ಯಂತ ಇರುವ ಇಂಥದೇ ಮುನ್ನೋಟ, ಗುರಿ, ಕಾರ್ಯತಂತ್ರ ಮತ್ತು ಧ್ಯೇಯೋದ್ದೇಶಗಳನ್ನು ಹೊಂದಿರುವ ಯಾವುದೇ ಇತರ ಸಂಸ್ಥೆಯೊಂದಿಗೆ ಅಥವಾ ಸಂಸ್ಥೆಗಳೊಂದಿಗೆ ಪಾಲುಗಾರಿಕೆ, ಸಹಯೋಗ, ಸಹಕಾರ, ಜಂಟಿ ಪ್ರಯತ್ನ, ಮೈತ್ರಿ ಕಾರ್ಯಕ್ರಮ ಅಥವಾ ಯಾವುದೇ ಇತರ ಪರಸ್ಪರ ಪ್ರಯೋಜನಕರ ಸಂಬಂಧಗಳ ಮೂಲಕ ಬೋಧಕ ವೃಂದದವರ, ಸಂಶೋಧಕರ ಮತ್ತು ಪೂರಕ ಸಿಬ್ಬಂದಿಯ ಅಭಿವೃದ್ಧಿಗಾಗಿ ಮತ್ತು ಅವರಿಗೆ ತರಬೇತಿ ನೀಡುವುದಕ್ಕಾಗಿ ಕಾರ್ಯಕ್ರಮಗಳನ್ನು ರೂಪಿಸುವುದು ಮತ್ತು ಕೈಗೊಳ್ಳುವುದು;

(x) ಭಾರತದಲ್ಲಿರುವ ಅಥವಾ ವಿದೇಶದಲ್ಲಿರುವ ಯಾವುದೇ ಸಂಸ್ಥೆಯ ಸಹಯೋಗದೊಂದಿಗೆ ಸಂಶೋಧನೆ ಮತ್ತು ಸಮಾಲೋಚನೆ ಹಾಗೂ ಶಿಫಾರಸನ್ನು ಪ್ರಾರಂಭಿಸುವುದು ಮತ್ತು ಕೈಗೊಳ್ಳುವುದು;

(xi) ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳನ್ನು ಅನುಸರಿಸಲು, ಉತ್ತೇಜಿಸಲು, ಸಾಧಿಸಲು ಮತ್ತು ಹೆಚ್ಚಿಸಲು ಅವಶ್ಯಕ ಅಥವಾ ಯುಕ್ತ ಕ್ರಮವನ್ನು ರೂಪಿಸುವುದು, ಕೈಗೊಳ್ಳುವುದು ಮತ್ತು ಕಾರ್ಯಗತಗೊಳಿಸುವುದು;

(xii) ಎಲ್ಲಾ ಜನರ ಜೀವನದ ಗುಣಮಟ್ಟವನ್ನು ಸುಧಾರಿಸುವ ಮತ್ತು ರಾಷ್ಟ್ರೀಯ ಅಭಿವೃದ್ಧಿಯನ್ನು ಸಾಧಿಸುವ ಸಾಮರ್ಥ್ಯಹೊಂದಿರುವಂಥ, ಸರ್ಕಾರವು ಅನುಮೋದಿಸಬಹುದಾದಂಥ ಯಾವುದೇ ಇತರ ಮೌಲ್ಯಯುತ ಧ್ಯೇಯೋದ್ದೇಶವನ್ನು ಅಥವಾ ಧ್ಯೇಯೋದ್ದೇಶಗಳನ್ನು ಅನುಸರಿಸುವುದು.

**8. ವಿಶ್ವವಿದ್ಯಾಲಯದ ಅಧಿಕಾರಗಳು.**– ವಿಶ್ವವಿದ್ಯಾಲಯವು ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ:–

(i) ಶಾಸನಗಳಲ್ಲಿ ಹೇಳಲಾದ ರೀತಿಯಲ್ಲಿ ಕಾಲಕಾಲಕ್ಕೆ ವಿಶ್ವವಿದ್ಯಾಲಯವು ನಿರ್ಧರಿಸಬಹುದಾದಂಥ ಕ್ಯಾಂಪಸ್ಸುಗಳು, ಪ್ರಾದೇಶಿಕ ಕೇಂದ್ರಗಳು ಮತ್ತು ಅಧ್ಯಯನ ಕೇಂದ್ರಗಳನ್ನು ಸ್ಥಾಪಿಸುವುದು, ನಿರ್ವಹಿಸುವುದು ಮತ್ತು ಅವುಗಳಿಗೆ ಮನ್ನಣೆ ನೀಡುವುದು;

(ii) ವಿಶ್ವವಿದ್ಯಾಲಯದ ಉದ್ದೇಶವನ್ನು ಕಾರ್ಯರೂಪಕ್ಕೆ ತರುವಲ್ಲಿ ಅಗತ್ಯವಾಗಬಹುದಾದಂಥ ಅಥವಾ ಕಾರ್ಯಸಾಧ್ಯವಾಗಬಹುದಾದಂಥ ಇತರ ಚಟುವಟಿಕೆಗಳನ್ನು ಕೈಗೊಳ್ಳುವುದು;

(iii) ಶಾಸನಗಳಲ್ಲಿ ಹೇಳಲಾದ ರೀತಿಯಲ್ಲಿ ಮತ್ತು ಷರತ್ತುಗಳಿಗೊಳಪಟ್ಟು ಪದವಿಗಳು ಅಥವಾ ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಪ್ರದಾನಮಾಡುವುದು;

(iv) ಶಾಸನಗಳನ್ವಯ ಸಂಶೋಧನಾ ವೇತನಗಳು (ಫೆಲೋಶಿಪ್‌ಗಳು), ವಿದ್ಯಾರ್ಥಿ ವೇತನಗಳು ಮತ್ತು ಬಹುಮಾನಗಳು, ಇತ್ಯಾದಿಗಳನ್ನು ಸ್ಥಾಪಿಸುವುದು ಮತ್ತು ನೀಡುವುದು;

(v) ಸಂದರ್ಭಾನುಸಾರ ಶಾಸನಗಳಲ್ಲಿ ಅಥವಾ ನಿಯಮಗಳಲ್ಲಿ ನಿಗದಿಪಡಿಸಬಹುದಾದಂಥ ಶುಲ್ಕಗಳು, ಬಿಲ್ಲುಗಳು, ಖರೀದಿ ಪಟ್ಟಿಗಳನ್ನು ಕೇಳಿಪಡೆದುಕೊಳ್ಳುವುದು ಮತ್ತು ಸ್ವೀಕರಿಸುವುದು ಹಾಗೂ ಚಾರ್ಜುಗಳನ್ನು ವಸೂಲು ಮಾಡುವುದು;

(vi) ವಿದ್ಯಾರ್ಥಿಗಳಿಗೆ ಮತ್ತು ಸಿಬ್ಬಂದಿಗಳಿಗೆ ಪಠ್ಯೇತರ ಚಟುವಟಿಕೆಗಳಿಗೆ ಅವಕಾಶಗಳನ್ನು ಕಲ್ಪಿಸುವುದು;

(vii) ವಿಶ್ವವಿದ್ಯಾಲಯದ ಅಥವಾ ಘಟಕ ಕಾಲೇಜಿನ, ಪ್ರಾದೇಶಿಕ ಕೇಂದ್ರಗಳ, ಅಧ್ಯಯನ ಕೇಂದ್ರಗಳ ಫ್ಯಾಕಲ್ಟಿ, ಅಧಿಕಾರಿಗಳು ಮತ್ತು ಸಿಬ್ಬಂದಿಗಳನ್ನು ನೇಮಕ ಮಾಡಿಕೊಳ್ಳುವುದು;

(viii) ವಿಶ್ವವಿದ್ಯಾಲಯದ ಅಥವಾ ಒಂದು ಘಟಕ ಕಾಲೇಜಿನ ಅಥವಾ ಒಂದು ಪ್ರಾದೇಶಿಕ ಕೇಂದ್ರದ, ಅಥವಾ ಅಧ್ಯಯನ ಕೇಂದ್ರದ ಉದ್ದೇಶಕ್ಕಾಗಿ ಯಾವುದೇ ರೀತಿಯ ದೇಣಿಗೆಗಳು ಮತ್ತು ಕೊಡುಗೆಗಳನ್ನು ಸ್ವೀಕರಿಸುವುದು ಮತ್ತು ಕಂಪೆನಿ ನ್ಯಾಸ ಮತ್ತು ದತ್ತಿ ಆಸ್ತಿಗಳೂ ಸೇರಿದಂತೆ, ಯಾವುದೇ ಚರ ಅಥವಾ ಸ್ಥಿರ ಆಸ್ತಿಯನ್ನು ಅರ್ಜಿಸುವುದು, ಹೊಂದಿರುವುದು, ನಿರ್ವಹಿಸುವುದು, ನಡೆಸುವುದು ಮತ್ತು ಹಸ್ತಾಂತರ ಮಾಡುವುದು;

(ix) ಹಾಲ್‌ಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸಿಕೊಂಡು ಬರುವುದು ಹಾಗೂ ವಿಶ್ವವಿದ್ಯಾಲಯದ ಅಥವಾ ಘಟಕ ಕಾಲೇಜಿನ ವಿದ್ಯಾರ್ಥಿಗಳಿಗೆ, ಸಿಬ್ಬಂದಿ ಮತ್ತು ಫ್ಯಾಕಲ್ಟಿಗಳಿಗೆ ವಸತಿ ಸ್ಥಳಗಳಿಗೆ ಮಾನ್ಯತೆ ನೀಡುವುದು;

(x) ವಸತಿಯ ಮೇಲ್ವಿಚಾರಣೆ ಮಾಡುವುದು ಮತ್ತು ನಿಯಂತ್ರಣ ಮಾಡುವುದು ಹಾಗೂ ವಿದ್ಯಾರ್ಥಿಗಳು ಮತ್ತು ಎಲ್ಲಾ ಪ್ರವರ್ಗಗಳ ಸಿಬ್ಬಂದಿಗಳಲ್ಲಿ ಶಿಸ್ತು ನಿಯಂತ್ರಣ ಮಾಡುವುದು ಮತ್ತು ನಡತೆ ಸಂಹಿತೆಯನ್ನು ರೂಪಿಸುವುದೂ ಒಳಗೊಂಡಂತೆ, ಅಂಥ ಸಿಬ್ಬಂದಿಗಳ ಸೇವಾಷರತ್ತುಗಳನ್ನು ನಿರೂಪಿಸುವುದು;

(xi) ಶೈಕ್ಷಣಿಕ, ಆಡಳಿತಾತ್ಮಕ ಮತ್ತು ಬೆಂಬಲ ಸಿಬ್ಬಂದಿಯ ಹುದ್ದೆಗಳನ್ನು ಮತ್ತು ಇತರ ಅವಶ್ಯ ಸ್ಥಾನಮಾನಗಳನ್ನು ಸೃಜಿಸುವುದು;

(xii) ವಿಶ್ವವಿದ್ಯಾಲಯವು ಕಾಲಕಾಲಕ್ಕೆ ನಿರ್ಧರಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಉದ್ದೇಶಗಳಿಗಾಗಿ ಇತರ ವಿಶ್ವವಿದ್ಯಾಲಯಗಳೊಡನೆ ಸಹಕರಿಸುವುದು ಮತ್ತು ಸಹಯೋಗ ಹೊಂದುವುದು;

(xiii) ದೂರ ಶಿಕ್ಷಣ ಪದ್ಧತಿಗೆ ಮತ್ತು ವಿಶ್ವವಿದ್ಯಾಲಯದ ಶೈಕ್ಷಣಿಕ ಕಾರ್ಯಕ್ರಮಗಳಿಗೆ ಸಂಬಂಧಪಟ್ಟಂತೆ ದೂರ ಶಿಕ್ಷಣವನ್ನು ಯಾವ ರೀತಿಯಲ್ಲಿ ಸಂಘಟಿಸಬಹುದು ಎಂಬುದಕ್ಕೆ ಉಪಬಂಧ ಕಲ್ಪಿಸುವುದು;

(xiv) ಫ್ಯಾಕಲ್ಟಿ, ಸಂಶೋಧನಾ ಅಸೋಸಿಯೇಟ್‌ಗಳು, ಸಿಬ್ಬಂದಿ ಮತ್ತಿತರ ನೌಕರರಿಗೆ ಪುನರ್ಮನನ ವ್ಯಾಸಂಗಕ್ರಮಗಳು, ಅಭಿಮುಖ ತರಬೇತಿ, ಕಾರ್ಯಾಗಾರಗಳು, ವಿಚಾರಗೋಷ್ಠಿಗಳು ಮತ್ತಿತರ ಕಾರ್ಯಕ್ರಮಗಳನ್ನು ಏರ್ಪಡಿಸುವುದು ಮತ್ತು ನಡೆಸುವುದು;

(xv) ಪ್ರಶಿಕ್ಷಣ ಪರಿಷತ್ತಿನ ಅನುಮೋದನೆಯೊಂದಿಗೆ ವಿಶ್ವವಿದ್ಯಾಲಯದ ಅಥವಾ ಘಟಕ ಕಾಲೇಜಿನ, ಪ್ರಾದೇಶಿಕ ಕೇಂದ್ರಗಳ ಮತ್ತು ಅಧ್ಯಯನ ಕೇಂದ್ರಗಳಿಗೆ ಪ್ರವೇಶಕ್ಕೆ ಮಾನಕ ಗುಣಮಟ್ಟಗಳನ್ನು ನಿರ್ಧರಿಸುವುದು;

(xvi) ವಿಶ್ವವಿದ್ಯಾಲಯದಲ್ಲಿ ಅಥವಾ ಘಟಕ ಕಾಲೇಜು, ಪ್ರಾದೇಶಿಕ ಕೇಂದ್ರ ಅಥವಾ ಅಧ್ಯಯನ ಕೇಂದ್ರದಲ್ಲಿ ಯಾವುದೇ ವ್ಯಾಸಂಗಕ್ರಮಕ್ಕೆ ಪ್ರವೇಶ ಪಡೆಯಲು ಕರ್ನಾಟಕ ರಾಜ್ಯದ ವಿದ್ಯಾರ್ಥಿಗಳಿಗೆ ವಿಶೇಷ ಉಪಬಂಧಗಳನ್ನು ಕಲ್ಪಿಸುವುದು;

(xvii) ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳನ್ನು ಕಾರ್ಯರೂಪಕ್ಕೆ ತರಲು ಅವಶ್ಯವಾಗಬಹುದಾದಂಥ ಇತರ ಎಲ್ಲಾ ಕ್ರಮಗಳನ್ನು ಅಥವಾ ಕಾರ್ಯಗಳನ್ನು, ಅವು ಮೇಲೆ ಹೇಳಿದ ಅಧಿಕಾರಗಳಿಗೆ ಪ್ರಾಸಂಗಿಕವಾಗಿರಲಿ ಅಥವಾ ಇಲ್ಲದಿರಲಿ, ಕೈಗೊಳ್ಳುವುದು;

(xviii) ಯುಜಿಸಿ, ಎಐಸಿಟಿಇ, ಎಂಸಿಐಗಳು ಅಥವಾ ಇತರ ನಿಯಂತ್ರಕ ಸಂಸ್ಥೆಗಳು ಒಳಗೊಂಡ ಶೈಕ್ಷಣಿಕ ಅಧ್ಯಯನವಾಗಲಿ ಅಥವಾ ಸಂಶೋಧನೆಯಾಗಿರಲಿ ಅಥವಾ ಇವೆರಡನ್ನು ಒಳಗೊಂಡಿರಲಿ, ಪದವಿ, ಸ್ನಾತಕೋತ್ತರ ಮತ್ತು ಡಾಕ್ಟರ್ ಮಟ್ಟದ ಪದವಿ ವ್ಯಾಸಂಗ ಕ್ರಮಗಳಿಗಾಗಿ ಅಂಥ ವ್ಯಾಸಂಗ ಕ್ರಮಗಳನ್ನು ಸ್ಥಾಪಿಸುವುದು, ಆದರೆ ವಿಶ್ವವಿದ್ಯಾಲಯವು ಡಿಪ್ಲೋಮಾಗಳು, ಪ್ರಮಾಣಪತ್ರ ವ್ಯಾಸಂಗ ಕ್ರಮಗಳು, ಅಲ್ಪಾವಧಿ ವ್ಯಾಸಂಗ ಕ್ರಮಗಳು ಮುಂತಾದವುಗಳನ್ನು ತನ್ನದೇ ಆದ ವಿಷಯಗಳಲ್ಲಿ ಪ್ರಾರಂಭಿಸಲು ಹಕ್ಕುಳ್ಳದ್ದಾಗಿರತಕ್ಕದ್ದು;

(xix) ಕಂಪೆನಿಯ ಚಟುವಟಿಕೆಗಳಿಂದ ವಿಶ್ವವಿದ್ಯಾಲಯದ ಶೈಕ್ಷಣಿಕ ಚಟುವಟಿಕೆಗಳನ್ನು ಸ್ಪಷ್ಟವಾಗಿ ಪ್ರತ್ಯೇಕವಾಗಿಡುವುದು;

(xx) ಫಿಲಂಗಳು, ಕ್ಯಾಸೆಟ್‌ಗಳು, ಧ್ವನಿಸುರುಳಿಗಳು, ದೃಶ್ಯಸುರುಳಿಗಳು, ಸಿ.ಡಿ.ಗಳು, ವಿ.ಸಿ.ಡಿ.ಗಳು, ಡಿ.ವಿ.ಡಿ.ಗಳು ಮತ್ತಿತರ ಮಾಧ್ಯಮಗಳೂ ಒಳಗೊಂಡಂತೆ ಬೋಧಕ ಸಾಮಗ್ರಿಗಳನ್ನು ಸಿದ್ಧಪಡಿಸುವುದಕ್ಕಾಗಿ ಅವಕಾಶ ಕಲ್ಪಿಸುವುದು;

(xxi) ಇತರ ವಿಶ್ವವಿದ್ಯಾಲಯಗಳ, ಸಂಸ್ಥೆಗಳ ಅಥವಾ ಇತರ ಉನ್ನತ ವಿದ್ಯಾಭ್ಯಾಸದ ಸ್ಥಳಗಳ ಪರೀಕ್ಷೆಗಳನ್ನು ಅಥವಾ ವ್ಯಾಸಂಗ ಅವಧಿಗಳನ್ನು (ಪೂರ್ಣವಾಗಿ ಅಥವಾ ಭಾಗಶ:) ವಿಶ್ವವಿದ್ಯಾಲಯದ ಪರೀಕ್ಷೆಗಳು ಅಥವಾ ವ್ಯಾಸಂಗ ಅವಧಿಗಳಿಗೆ ಸಮನೆಂದು ಮಾನ್ಯತೆ ನೀಡುವುದು ಮತ್ತು ಹಾಗೆ ನೀಡಿದ ಮಾನ್ಯತೆಗಳನ್ನು ಯಾವುದೇ ಸಮಯದಲ್ಲಿ ಹಿಂದಕ್ಕೆ ಪಡೆಯುವುದು;

(xxii) ಆಡಳಿತ ಮಂಡಳಿಯ ಅನುಮೋದನೆಯೊಡನೆ ವಿಶ್ವವಿದ್ಯಾಲಯದ ಉದ್ದೇಶಗಳಿಗಾಗಿ ವಿಶ್ವವಿದ್ಯಾಲಯದ ಸ್ವತ್ತುಗಳನ್ನು ಭದ್ರತೆಯಾಗಿ ನೀಡಿ ಅಥವಾ ಅನ್ಯಥಾ ಹಣವನ್ನು ಪಡೆಯುವುದು, ಸಂಗ್ರಹಿಸುವುದು, ಚಂದಾದಾರರಾಗುವುದು ಮತ್ತು ಸಾಲ ಪಡೆಯುವುದು;

(xxiii) ಮೇಲೆ ಹೇಳಿದಂತೆ ವಿಶ್ವವಿದ್ಯಾಲಯದ ಸಂಬಂಧಿಸಿದ ಅಥವಾ ಪ್ರಾಸಂಗಿಕವಾದ ಹೆಚ್ಚಿನ ಯಾವುದೇ ಇತರ ಚಟುವಟಿಕೆಗಳನ್ನು ಕೈಗೊಳ್ಳುವುದು.

**9. ವಿಶ್ವವಿದ್ಯಾಲಯವು ಎಲ್ಲಾ ವರ್ಗಗಳು, ಜಾತಿಗಳು, ಪಂಥ ಮತ್ತು ಲಿಂಗಭೇದವಿಲ್ಲದೆ ಎಲ್ಲರಿಗೂ ಮುಕ್ತವಾಗಿರತಕ್ಕದ್ದು.–** (1) ವಿಶ್ವವಿದ್ಯಾಲಯವು ವರ್ಗ, ಪಂಥ, ಲಿಂಗ, ಜನಾಂಗ ಅಥವಾ ಆರ್ಥಿಕ ಹಿನ್ನಲೆ ಯಾವುದೇ ಇರಲಿ ಎಲ್ಲಾ ವ್ಯಕ್ತಿಗಳಿಗೂ ಮುಕ್ತವಾಗಿರತಕ್ಕದ್ದು:

ಪರಂತು, ವಿಶ್ವವಿದ್ಯಾಲಯದ ಶೈಕ್ಷಣಿಕ ಕಾರ್ಯಕ್ರಮಗಳಲ್ಲಿನ ಒಟ್ಟು ಸೀಟುಗಳ ಶೇಕಡ ಇಪ್ಪತ್ತೈದಕ್ಕಿಂತ ಕಡಿಮೆಯಿಲ್ಲದ ಸೀಟುಗಳನ್ನು ರಾಜ್ಯದಲ್ಲಿ ಅಧಿವಾಸಿಗಳಾಗಿರುವ ವಿದ್ಯಾರ್ಥಿಗಳಿಗೆ, ಅವರು ಪ್ರವೇಶಕ್ಕೆ ಇರುವ ಮಾನದಂಡಗಳನ್ನು ಪೂರೈಸುವುದಕ್ಕೆ ಒಳಪಟ್ಟು, ಕಾಯ್ದಿರಿಸತಕ್ಕದ್ದು:

ಮತ್ತು ಪರಂತು, ಅಂಥ ವಿದ್ಯಾರ್ಥಿಗಳು ಸಾಕಷ್ಟು ಸಂಖ್ಯೆಯಲ್ಲಿ ಲಭ್ಯವಿಲ್ಲದಿದ್ದಾಗ ಹಾಗೆ ಕಾಯ್ದಿರಿಸಿದ ಸೀಟುಗಳನ್ನು ಸಾಮಾನ್ಯ ವರ್ಗದ ಅಭ್ಯರ್ಥಿಗಳಿಂದ ಭರ್ತಿಮಾಡತಕ್ಕದ್ದು.

(2) ವಿಶ್ವವಿದ್ಯಾಲಯವು ಕರ್ನಾಟಕ ರಾಜ್ಯದ ವಿದ್ಯಾರ್ಥಿಗಳ ಪ್ರವೇಶಕ್ಕಾಗಿ ವಿಶೇಷ ಉಪಬಂಧಗಳನ್ನು ರಚಿಸತಕ್ಕದ್ದು.

**10. ರಾಷ್ಟ್ರೀಯ ಅಧಿಮಾನ್ಯತೆ.–** ವಿಶ್ವವಿದ್ಯಾಲಯವು ಸಂಬಂಧಪಟ್ಟ ರಾಷ್ಟ್ರೀಯ ಅಧಿಮಾನ್ಯತಾ ಸಂಸ್ಥೆಗಳಿಂದ ಅಧಿಮಾನ್ಯತೆಯನ್ನು ಕೋರತಕ್ಕದ್ದು.

**11. ಪ್ರಾಯೋಜಕ ಸಂಸ್ಥೆಯ ಅಧಿಕಾರಗಳು.–** ಪ್ರಾಯೋಜಕ ಸಂಸ್ಥೆಯು ವಿಶ್ವವಿದ್ಯಾಲಯಕ್ಕೆ ಸಂಬಂಧಿಸಿದಂತೆ ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು, ಇವುಗಳಲ್ಲಿ ಪ್ರತಿಯೊಂದನ್ನು ಪ್ರಾಯೋಜಕ ಸಂಸ್ಥೆಯು ತನ್ನ ವಿವೇಚನಾನುಸಾರ ಚಲಾಯಿಸಬಹುದು, ಎಂದರೆ:–

(i) ಕುಲಾಧಿಪತಿಯವರನ್ನು ನೇಮಿಸುವುದು ಅಥವಾ ಪುನರ್‌ನೇಮಿಸುವುದು ಅಥವಾ ಅವರ ನೇಮಕಾತಿಯನ್ನು ಅಂತ್ಯಗೊಳಿಸುವುದು;

(ii) ವಿಶ್ವವಿದ್ಯಾಲಯದ ಪ್ರಥಮ ಪ್ರಬಂಧಕ ಮಂಡಳಿಯನ್ನು ರಚಿಸುವುದು;

(iii) ಪ್ರಬಂಧಕ ಮಂಡಳಿಯ ಅಧ್ಯಕ್ಷರನ್ನು ನಾಮನಿರ್ದೇಶಿಸುವುದು;

(iv) ಪ್ರಬಂಧಕ ಮಂಡಳಿಯ ಸದಸ್ಯರಾಗಿ ಮೂರು ವ್ಯಕ್ತಿಗಳನ್ನು ನಾಮನಿರ್ದೇಶಿಸುವುದು;

(v) ಆಡಳಿತ ಮಂಡಳಿಯ ಸದಸ್ಯರಾಗಿ ಇಬ್ಬರು ವ್ಯಕ್ತಿಗಳನ್ನು ನಾಮ ನಿರ್ದೇಶಿಸುವುದು;

(vi) ವಿಶ್ವವಿದ್ಯಾಲಯದ ದತ್ತಿ ನಿಧಿಗೆ ದೇಣಿಗೆ ನೀಡಲು ನಿಧಿ ಮೂಲಗಳನ್ನು ನಿರ್ಧರಿಸುವುದು;

(vii) ವಿಶ್ವವಿದ್ಯಾಲಯದ ಹಣದ ವಿನಿಯೋಗ ಮತ್ತು ವೆಚ್ಚ ಮಾಡುವುದನ್ನು ನಿರ್ಧರಿಸುವುದು;

(viii) ಈ ಅಧಿನಿಯಮದಲ್ಲಿ ಉಪಬಂಧಿಸಿರುವ ವಿಧಾನದಲ್ಲಿ ಪ್ರಬಂಧಕ ಮಂಡಳಿಯ ಸಭೆಯಲ್ಲಿಯ ವಿವಾದಗಳನ್ನು ಬಗೆಹರಿಸುವುದು;

## ಅಧ್ಯಾಯ – III

## ವಿಶ್ವವಿದ್ಯಾಲಯದ ಅಧಿಕಾರಿಗಳು

**12. ವಿಶ್ವವಿದ್ಯಾಲಯದ ಅಧಿಕಾರಿಗಳು.–** ಈ ಮುಂದಿನವರು ವಿಶ್ವವಿದ್ಯಾಲಯದ ಅಧಿಕಾರಿಗಳಾಗಿರತಕ್ಕದ್ದು, ಎಂದರೆ:–

(i) ಸಂದರ್ಶಕರು;

(ii) ಸಹ ಸಂದರ್ಶಕರು;

(iii) ಕುಲಾಧಿಪತಿಗಳು;

(ಎಫ್) ರಾಜ್ಯ ಸರ್ಕಾರವು, ಈ ಅಧಿನಿಯಮದಡಿಯಲ್ಲಿ ವಿಧ್ಯುಕ್ತವಾಗಿ ಅಧಿಸೂಚಿಸಿದ ಒಂದು ಅಥವಾ ಹೆಚ್ಚು ವಿಶೇಷ ಆರ್ಥಿಕ ವಲಯಗಳು (ಎಸ್‌ಇಜೆಡ್‌ಎಸ್), ಕೈಗಾರಿಕಾ ಪಾರ್ಕುಗಳು, ಮುಕ್ತ ವ್ಯಾಪಾರ ಮತ್ತು ಉಗ್ರಾಣ ವಲಯಗಳು, ರಫ್ತು ಆಧಾರಿತ ಘಟಕಗಳು, ಅಥವಾ ಅಭಿವೃದ್ಧಿ ಕೇಂದ್ರಗಳನ್ನು ಒಳಗೊಳ್ಳಬಹುದು. ಜಾರಿಯಲ್ಲಿರುವ ಸಂಬಂಧಪಟ್ಟ ಅಧಿನಿಯಮಗಳು ಅಥವಾ ಕಾರ್ಯನೀತಿ/ ಅಥವಾ ಕಾರ್ಯನೀತಿಗಳಡಿಯಲ್ಲಿ ಲಭ್ಯವಿರುವ ಎಲ್ಲಾ ಪ್ರಯೋಜನಗಳು, ಮಾಹಿತಿ ತಂತ್ರಜ್ಞಾನದ ಹೂಡಿಕೆ ಪ್ರದೇಶಗಳ ಒಂದು ಭಾಗವಾಗಿ ಸದರಿ ವಲಯಗಳಿಗೆ ಅಥವಾ ಸಂದರ್ಭಾನುಸಾರ ಪಾರ್ಕುಗಳಿಗೆ ಲಭ್ಯವಾಗುವುದು ಮುಂದುವರೆಯತಕ್ಕದ್ದು;

(ಜಿ) ಜಾರಿಯಲ್ಲಿರುವ ಒಪ್ಪಂದಗಳನ್ನು / ಕೈಗಾರಿಕೆಗಳು ಮತ್ತು ಎಸ್ಟೇಟುಗಳನ್ನು / ಸೇವೆಗಳನ್ನು ಒಳಗೊಳ್ಳತಕ್ಕದ್ದು ಮತ್ತು ಪ್ರದೇಶದಿಂದ ಪ್ರಯೋಜನವಾಗತಕ್ಕದ್ದು ಮತ್ತು ಅದಕ್ಕೆ ಪೂರಕವಾಗಿರತಕ್ಕದ್ದು;

(ಹೆಚ್) ಹೊಸ ಸಂಯೋಜಿತ ಉಪನಗರಗಳನ್ನೂ ಕೂಡಾ ಒಳಗೊಳ್ಳತಕ್ಕದ್ದು.

(4) ಪ್ರತಿಯೊಂದು ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶವು, ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳ ಸ್ಥಾಪನೆಯಲ್ಲಿ ಮಹತ್ವದ ಪಾತ್ರವನ್ನು ವಹಿಸತಕ್ಕ ಕೆಲವು ಸ್ಥಿರತ್ವ (ಆಂಕರಿಂಗ್) ಮಾಹಿತಿ ತಂತ್ರಜ್ಞಾನ / ಮಾಹಿತಿ ತಂತ್ರಜ್ಞಾನ ಪೂರಕ ಸೇವೆಗಳು ಮತ್ತು ವಿದ್ಯುನ್ಮಾನ ಹಾರ್ಡ್‌ವೇರ್ ಉತ್ಪಾದನಾ ಘಟಕಗಳನ್ನು ಹೊಂದಿರಬಹುದು.

(5) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999 ರ (2000ದ ಕರ್ನಾಟಕ ಅಧಿನಿಯಮ 29) ಉಪಬಂಧಗಳಿಗನುಸಾರವಾಗಿ ಪಾರದರ್ಶಕ ವ್ಯವಸ್ಥೆಯ ಮೂಲಕ, ರಾಜ್ಯ ಸರ್ಕಾರವು ಆಯ್ಕೆಮಾಡಿದ ಅಭಿವೃದ್ಧಿಕಾರ ಅಥವಾ ಅಭಿವೃದ್ಧಿಕಾರರು ಅಥವಾ ಸಹ–ಅಭಿವೃದ್ಧಿಕಾರರ ಒಂದು ಸಮೂಹವು ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳ ಆಂತರಿಕ ಮೂಲಸೌಕರ್ಯಗಳನ್ನು ನಿರ್ಮಿಸತಕ್ಕದ್ದು ಮತ್ತು ನಿರ್ವಹಿಸತಕ್ಕದ್ದು. ಬಾಹ್ಯ ಸಂಪರ್ಕಗಳನ್ನು ಭಾರತ ಸರ್ಕಾರ ಮತ್ತು ರಾಜ್ಯ ಸರ್ಕಾರವು ಒದಗಿಸತಕ್ಕದ್ದು.

(6) ಬಾಹ್ಯ ಹಾಗೆಯೇ ಆಂತರಿಕ ಮೂಲಸೌಕರ್ಯದ ಬಳಕೆದಾರರು, ಅದರ ಬಳಕೆಗಾಗಿ, ಕೇಂದ್ರ ಅಥವಾ ರಾಜ್ಯ ಸರ್ಕಾರವು ಆಯವ್ಯಯ ಸಂಪನ್ಮೂಲಗಳ ಮೂಲಕ ಬೆಂಬಲಿಸುವ ಸೇವೆಯ ವ್ಯಾಪ್ತಿಯನ್ನು ಹೊರತುಪಡಿಸಿ, ಹಣವನ್ನು ಸಂದಾಯ ಮಾಡತಕ್ಕದ್ದು.

(7) (2)ನೇ ಉಪ ಪ್ರಕರಣದಡಿಯಲ್ಲಿ ಘೋಷಣೆಯ ತರುವಾಯ, ಪ್ರಸ್ತಾವಿತ ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳ ಸಮಗ್ರ ಪ್ರದೇಶವು, ಅದರಡಿಯಲ್ಲಿ ನಿರ್ದಿಷ್ಟ ಪಡಿಸಲಾಗಿದ ನಿಬಂಧನೆಗಳಿಗನುಸಾರವಾಗಿ ಕೃಷಿ ಭೂಮಿಯಿಂದ ಕೃಷಿಯೇತರ ಭೂಮಿಯಾಗಿ ಪರಿವರ್ತಿಸಲು ಅರ್ಹವಾಗತಕ್ಕದ್ದು.

(8) ರಾಜ್ಯ ಸರ್ಕಾರವು, ಅಂಥ ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳಿಗೆ, ಸಾರ್ವಜನಿಕ ರಸ್ತೆಗಳು, ಉದ್ಯಾನಗಳು ಮತ್ತು ಉಪಯುಕ್ತ ಸಂಪರ್ಕಗಳಂಥ ಸಾರ್ವಜನಿಕ ಸೌಕರ್ಯಗಳನ್ನು ಒಳಗೊಂಡ ಮೂಲ ಸೌಕರ್ಯಗಳನ್ನು, ನಿಯಮಿಸಲಾದ ಕಾಲ ಮಿತಿಯೊಳಗೆ ಒದಗಿಸತಕ್ಕದ್ದು.

(9) ಮಹಾ ಯೋಜನೆಯ ಸೂಕ್ತ ಅನುಷ್ಠಾನವನ್ನು ಖಚಿತಗೊಳಿಸುವುದಕ್ಕಾಗಿ, ಯಾವ ಉದ್ದೇಶಕ್ಕಾಗಿ ಘೋಷಿಸಲಾದ ಭೂಮಿಯನ್ನು ಸ್ವಾಧೀನ ಪಡಿಸಿಕೊಳ್ಳಲಾಗಿದೆಯೋ ಆ ಉದ್ದೇಶಕ್ಕಾಗಿ ಮೀಸಲಿಡತಕ್ಕದ್ದು.

**4. ರಾಜ್ಯ ಸರ್ಕಾರವು ಒದಗಿಸಬೇಕಾದ ಮೂಲ ಸೌಲಭ್ಯಗಳು.–** (1) ರಾಜ್ಯ ಸರ್ಕಾರವು ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳಿಗೆ ಈ ಮುಂದಿನ ಮೂಲಸೌಕರ್ಯಗಳನ್ನು ಒದಗಿಸತಕ್ಕದ್ದು, ಅವುಗಳೆಂದರೆ:–

(ಎ) ವಿದ್ಯುಚ್ಛಕ್ತಿ ಸಂಪರ್ಕ ಕಲ್ಪಿಸುವುದು ಮತ್ತು ವಿಶ್ವಾಸಾರ್ಹವಾದ ಹಾಗೂ ಉತ್ತಮ ಗುಣಮಟ್ಟದ ವಿದ್ಯಚ್ಛಕ್ತಿಯ ಲಭ್ಯತೆ. ಘಟಕಗಳು, ರಾಜ್ಯ ವಿದ್ಯುತ್ ನಿಯಂತ್ರಣ ಆಯೋಗದ ವಿನಿಯಮಗಳ ಅನ್ವಯ ಮುಕ್ತ ಪ್ರವೇಶ ಅವಕಾಶವನ್ನು ಕೋರಬಹುದು.

(ಬಿ) ಒಟ್ಟಾರೆ ನೀರಿನ ಅಗತ್ಯತೆಗಳನ್ನು ಒದಗಿಸುವುದು;

(ಸಿ) ರಸ್ತೆ ಸಂಪರ್ಕ ಕಲ್ಪಿಸುವುದು (ರಾಜ್ಯ ರಸ್ತೆಗಳು) ಮತ್ತು ಹತ್ತಿರದ ವಿಮಾನ ನಿಲ್ದಾಣಕ್ಕೆ ಸಮೂಹ ಸಾರಿಗೆ ಸಂಪರ್ಕ ಕಲ್ಪಿಸುವುದು;

(ಡಿ) ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳ ತುದಿಯಿಂದ, ಅಂತಿಮ ವಿಲೆ ಸ್ಥಳಗಳವರೆಗೆ ಒಳಚರಂಡಿ ಮತ್ತು ಕಲ್ಮಷ ನೀರು ಸಂಸ್ಕರಣಾ ಸಂಪರ್ಕ ಸಾಧನಗಳು;

(ಇ) ಆರೋಗ್ಯ, ಸುರಕ್ಷತೆ ಮತ್ತು ಪರಿಸರ ಕಾಳಜಿಗೆ ಸಂಬಂಧಿಸಿದಂತೆ ಸೂಕ್ತ ಮೂಲಸೌಕರ್ಯಗಳು;

(ಎಫ್) ಸೂಕ್ತ ಮತ್ತು ಸಾಕಷ್ಟು ನಿವಾಸ ಸೌಲಭ್ಯಗಳು;

(ಜಿ) ಶೈಕ್ಷಣಿಕ ಸೌಲಭ್ಯಗಳು;

(ಎಚ್) ಆರೋಗ್ಯ ಸೌಲಭ್ಯಗಳು;

(ಐ) ಸ್ಥಳೀಯ ವಾಣಿಜ್ಯ ಸೌಲಭ್ಯಗಳು;

(ಜೆ) ಮನರಂಜನಾ ಸೌಲಭ್ಯಗಳು;

(ಕೆ) ಸಾಮಾಜಿಕ–ಸಾಂಸ್ಕೃತಿಕ ಮತ್ತು ಮನೋರಂಜನಾ ಸೌಲಭ್ಯಗಳು; ಹಾಗೂ

(ಎಲ್) ನಿಯಮಿಸಬಹುದಾದ ಇತರ ಯಾವುದೇ ಸೌಲಭ್ಯ.

(2) ಪರಿಸರ ಮತ್ತು ಅರಣ್ಯ ಮಂತ್ರಾಲಯವು ನಿಯಮಿಸಿದ ಮಾನಕಗಳು ಮತ್ತು ಗುಣಮಟ್ಟಗಳನ್ನು ಅನುಸರಿಸತಕ್ಕದ್ದು ಎಂಬುದನ್ನು ರಾಜ್ಯ ಸರ್ಕಾರವು ಖಚಿತ ಪಡಿಸಿಕೊಳ್ಳತಕ್ಕದ್ದು.

(3) (1)ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟ ಪಡಿಸಲಾದ ಸೌಲಭ್ಯಗಳನ್ನು ಅಭಿವೃದ್ಧಿಗಾರನ ಮೂಲಕ ರಾಜ್ಯ ಸರ್ಕಾರವು ಒದಗಿಸತಕ್ಕದ್ದು. ಆದಾಗ್ಯೂ, ಕಾರ್ಯನೀತಿ ನಿರ್ಣಯದಲ್ಲಿ ಸೂಚಿಸಲಾದಂತೆ ಕೇಂದ್ರ ಸರ್ಕಾರವೂ ಸಹ ನೆರವು ನೀಡತಕ್ಕದ್ದು.

**5. ಪ್ರೋತ್ಸಾಹಧನಗಳ ಹೆಚ್ಚುವರಿ ಪ್ಯಾಕೇಜುಗಳು.–** ರಾಜ್ಯ ಸರ್ಕಾರವು, ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳ ಅಭಿವೃದ್ಧಿಗಾಗಿ ಮತ್ತು ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳಲ್ಲಿ ಸ್ಥಾಪಿಸಲಾಗಿರುವ ಮಾಹಿತಿ ತಂತ್ರಜ್ಞಾನ/ಮಾಹಿತಿ ತಂತ್ರಜ್ಞಾನ ಪೂರಕ ಸೇವೆಗಳು / ವಿದ್ಯುನ್ಮಾನ ಹಾರ್ಡ್‌ವೇರ್ ಉತ್ಪಾದನಾ ಘಟಕಗಳಿಗಾಗಿ ಪ್ರೋತ್ಸಾಹಧನಗಳ ಹೆಚ್ಚುವರಿ ಪ್ಯಾಕೇಜನ್ನು (ಗಳನ್ನು) ಸಹ ಅಧಿಸೂಚಿಸಬಹುದು.

## ಅಧ್ಯಾಯ – III

## ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳಿಗಾಗಿ ಭೂ ಸ್ವಾಧೀನತೆ ಮತ್ತು ಹಂಚಿಕೆ

**6. ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳಿಗಾಗಿ ಭೂ ಸ್ವಾಧೀನತೆ.–** (1) ನೋಡಲ್ ಇಲಾಖೆಯಿಂದ ಪ್ರಸ್ತಾವವನ್ನು ಸ್ವೀಕರಿಸಿದ ತರುವಾಯ, ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳಿಗೆ, ವ್ಯವಸ್ಥಾಪನಾ ಮಂಡಳಿಯ ಮೂಲಕ, ಸ್ವಾಧೀನತೆ ವೆಚ್ಚಗಳು ಯಾವುದಾದರೂ ಇದ್ದಲ್ಲಿ, ಅವುಗಳನ್ನು ಅಭಿವೃದ್ಧಿಗಾರ ಅಥವಾ ಸಹ– ಅಭಿವೃದ್ಧಿಗಾರನು ಪಾವತಿಸುವುದಕ್ಕೆ ಒಳಪಟ್ಟು,–

(ಎ) ಭೂ ಸ್ವಾಧೀನ ಅಧಿನಿಮಯ, 1894ರ ಉಪಬಂಧಗಳಿಗೆ ಅನುಸಾರವಾಗಿ ರಾಜ್ಯ ಸರ್ಕಾರವು; ಅಥವಾ

(ಬಿ) ಪ್ರಾಧಿಕಾರದ ಮೂಲಕ, ಅಂಥ ಪ್ರಾಧಿಕಾರಕ್ಕೆ ಅನ್ವಯವಾಗುವ ಕಾನೂನಿಗೆ ಅನುಸಾರವಾಗಿ;

– ಭೂ ಸ್ವಾಧೀನತೆಯನ್ನು ಮಾಡತಕ್ಕದ್ದು.

(2) ರಾಜ್ಯ ಸರ್ಕಾರ ಅಥವಾ ಸಂದರ್ಭಾನುಸಾರ ಪ್ರಾಧಿಕಾರವು (1)ನೇ ಉಪ ಪ್ರಕರಣದ ಅಡಿಯಲ್ಲಿ ಹಾಗೆ ಸ್ವಾಧೀನ ಪಡಿಸಿಕೊಂಡ ಭೂಮಿಯನ್ನು, ವ್ಯವಸ್ಥಾಪನಾ ಮಂಡಳಿಗೆ ವರ್ಗಾವಣೆ ಮಾಡತಕ್ಕದ್ದು ಹಾಗೂ ತದನಂತರ ಅಂಥ ಭೂಮಿಯು ವ್ಯವಸ್ಥಾಪನಾ ಮಂಡಳಿಯಲ್ಲಿ ನಿಹಿತವಾಗತಕ್ಕದ್ದು.

**7. ವ್ಯವಸ್ಥಾಪನಾ ಮಂಡಳಿಯಿಂದ ಭೂ ಹಂಚಿಕೆ.–**(1) ವ್ಯವಸ್ಥಾಪನಾ ಮಂಡಳಿಯು, ನಿಯಮಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು, 8ನೇ ಪ್ರಕರಣದ (4)ನೇ ಉಪ ಪ್ರಕರಣದ (ಸಿ) ಖಂಡದಡಿಯಲ್ಲಿ ವ್ಯವಸ್ಥಾಪನಾ ಮಂಡಳಿಯು ಸಿದ್ಧಪಡಿಸಿದ ಮಹಾ ಯೋಜನೆಗನುಸಾರ ಈ ಅಧಿನಿಯಮದಡಿಯಲ್ಲಿ ಅಭಿವೃದ್ಧಿ ಉದ್ದೇಶಗಳಿಗಾಗಿ, ಅಭಿವೃದ್ಧಿಗಾರನಿಗೆ ಅಗತ್ಯವಾದ ಭೂಮಿಯನ್ನು ವರ್ಗಾವಣೆ ಮಾಡತಕ್ಕದ್ದು.

(2) ಮಹಾ ಯೋಜನೆಗೆ ಅನುಸಾರವಾಗಿ ಭೂಮಿಯನ್ನು ಅಭಿವೃದ್ಧಿಪಡಿಸಿದ ತರುವಾಯ, ಅಭಿವೃದ್ಧಿಗಾರನು, ನಿಯಮಿಸಬಹುದಾದಂಥ ಸಮಯದೊಳಗೆ ಅಭಿವೃದ್ಧಿ ಹೊಂದಿದ ಭೂಮಿಯ ಕನಿಷ್ಠ ಶೇಕಡಾ ಎಪ್ಪತ್ತೈದನ್ನು ಉದ್ಯಮದಾರರಿಗೆ ಮಾರಾಟ ಮಾಡತಕ್ಕದ್ದು.

## ಅಧ್ಯಾಯ – IV

## ವ್ಯವಸ್ಥಾಪನಾ ಮಂಡಳಿಯ ರಚನೆ ಮತ್ತು ಅದರ ಪ್ರಕಾರ್ಯಗಳು

**8. ವ್ಯವಸ್ಥಾಪನಾ ಮಂಡಳಿಯ ರಚನೆ ಮತ್ತು ಅದರ ಪ್ರಕಾರ್ಯಗಳು.–** (1)ರಾಜ್ಯ ಸರ್ಕಾರವು, ಪ್ರತಿಯೊಂದು ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳಿಗೆ, ಈ ಮುಂದಿನವರುಗಳನ್ನೊಳಗೊಂಡ ಒಂದು ವ್ಯವಸ್ಥಾಪನಾ ಮಂಡಳಿಯನ್ನು ರಚಿಸತಕ್ಕದ್ದು, ಎಂದರೆ:–

| | |
|---|---|
| (ಎ) ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನದ ಪ್ರಭಾರದಲ್ಲಿರುವ ಸಚಿವರು | – ಅಧ್ಯಕ್ಷರು |
| (ಬಿ) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ | – ಉಪಾಧ್ಯಕ್ಷರು |
| (ಸಿ) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ | – ಸದಸ್ಯರು |
| (ಡಿ) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ | – ಸದಸ್ಯರು |
| (ಇ) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಇಂಧನ ಇಲಾಖೆ | – ಸದಸ್ಯರು |
| (ಎಫ್) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ | – ಸದಸ್ಯರು |
| (ಜಿ) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ | – ಸದಸ್ಯರು |
| (ಎಚ್) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಜಲ ಸಂಪನ್ಮೂಲ ಇಲಾಖೆ | – ಸದಸ್ಯರು |
| (ಐ) ಸದಸ್ಯ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ. | – ಸದಸ್ಯರು |
| (ಜೆ) ಮುಖ್ಯ ಕಾರ್ಯನಿರ್ವಾಹಣಾಧಿಕಾರಿ | ಸದಸ್ಯ ಕಾರ್ಯದರ್ಶಿ |

(2) ವ್ಯವಸ್ಥಾಪನಾ ಮಂಡಳಿಯು ಸಂಬಂಧಪಟ್ಟ ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶದ ಬಗ್ಗೆ ಯಾವುದೇ ಪ್ರಶ್ನೆಯನ್ನು ಪರಿಗಣಿಸುತ್ತಿರುವಾಗ, ವ್ಯವಸ್ಥಾಪನಾ ಮಂಡಳಿಯು ಸಂಬಂಧಪಟ್ಟ ಅಭಿವೃದ್ಧಿಗಾರ ಅಥವಾ ಸಹ–ಅಭಿವೃದ್ಧಿಗಾರನನ್ನೂ ಸದಸ್ಯನಾಗಿ ಜೊತೆಗೆ ಸೇರಿಸಿಕೊಳ್ಳಬಹುದು.

(3) ವ್ಯವಸ್ಥಾಪನಾ ಮಂಡಳಿಯು, ಮೇಲೆ ಹೇಳಿದ ಹೆಸರಿನ, ನಿರಂತರ ಉತ್ತರದಾಯಿತ್ವವನ್ನುಳ್ಳ ನಿಗಮಿತ ನಿಕಾಯವಾಗಿರತಕ್ಕದ್ದು ಮತ್ತು ಚರ ಮತ್ತು ಸ್ಥಿರ ಸ್ವತ್ತುಗಳೆರಡನ್ನು ಆರ್ಜಿಸುವ, ಧಾರಣ ಮಾಡುವ, ವಿಲೆ ಮಾಡುವ ಅಧಿಕಾರವನ್ನು ಹಾಗೂ ಒಂದು ಸಾಮಾನ್ಯ ಮೊಹರನ್ನು ಹೊಂದಿರತಕ್ಕದ್ದು ಹಾಗೂ ಸದರಿ ಹೆಸರಿನಿಂದ ದಾವೆ ಹೂಡತಕ್ಕದ್ದು ಅಥವಾ ದಾವೆಗೆ ಗುರಿಯಾಗತಕ್ಕದ್ದು.

(4) ವ್ಯವಸ್ಥಾಪನಾ ಮಂಡಳಿಯು, ಈ ಮುಂದಿನ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು, ಎಂದರೆ:–

(ಎ) ಇದು ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳ ಅಭಿವೃದ್ಧಿ ಮತ್ತು ನಿರ್ವಹಣೆಗೆ ಜವಾಬ್ದಾರಿಯಾಗಿರತಕ್ಕದ್ದು.

(ಬಿ) ಇದು ರಾಜ್ಯ ಮಟ್ಟದ ಅನುಮೋದನೆಗಳನ್ನು ನೀಡತಕ್ಕದ್ದು/ ತ್ವರಿತಗೊಳಿಸತಕ್ಕದ್ದು.

(ಸಿ) ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961ರ ಅನುಸಾರವಾಗಿ ಸಂಯೋಜಿತ ಉಪ ನಗರ, ಸಂಸ್ಕರಣಾ ಮತ್ತು ಸಂಸ್ಕರಣೇತರ ಪ್ರದೇಶಗಳಿಗಾಗಿ ಪ್ರದೇಶವನ್ನು ಕಾಯ್ದಿರಿಸಿ ವಿವರವಾದ ಒಂದು ಮಹಾ ಯೋಜನೆಯನ್ನು ಮತ್ತು ನಿಯಮಿಸಬಹುದಾದಂಥ ಇತರ ವಿವರಗಳನ್ನು ಸಿದ್ಧಪಡಿಸತಕ್ಕದ್ದು.

(ಡಿ) ನಿಯಮಿಸಬಹುದಾದಂಥ ಕಾಲಮಿತಿಯೊಳಗೆ ಅಂಥ ಒಪ್ಪಿಗೆಯನ್ನು ಪಡೆದ ತರುವಾಯ ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶದ ಘಟಕಗಳನ್ನು ಸ್ಥಾಪಿಸುವುದಕ್ಕಾಗಿ ಪ್ರಸ್ತಾವಗಳನ್ನು ಅನುಮೋದಿಸತಕ್ಕದ್ದು.

(ಇ) ಅಭಿವೃದ್ಧಿಗಾರ ಅಥವಾ ಸಹ–ಅಭಿವೃದ್ಧಿಗಾರರನ್ನು ಆಯ್ಕೆ ಮಾಡಿಕೊಳ್ಳಲು ಮತ್ತು ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶದ ಅಭಿವೃದ್ಧಿಗಾಗಿ ಒಪ್ಪಂದಗಳನ್ನು ಮಾಡಿಕೊಳ್ಳಲು ಅಧಿಕಾರವನ್ನು ಹೊಂದಿರತಕ್ಕದ್ದು.

(ಎಫ್) ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶದಲ್ಲಿ, ವಿದೇಶಿ ಮತ್ತು ದೇಶೀ ಇವೆರಡಿರಂದಲೂ ಹೂಡಿಕೆಗಳನ್ನು ಪ್ರೋತ್ಸಾಹಿಸುವುದಕ್ಕಾಗಿ ಉಪಬಂಧ ಕಲ್ಪಿಸತಕ್ಕದ್ದು.

(ಜಿ) ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶದೊಳಗೆ ಉತ್ಪಾದನೆಗೆ ಮತ್ತು ಅದರಿಂದ ಮಾಡಲಾಗುವ ರಫ್ತುಗಳಿಗೆ ಪ್ರೋತ್ಸಾಹವನ್ನು ಖಚಿತಪಡಿಸಿಕೊಳ್ಳತಕ್ಕದ್ದು.

(ಎಚ್) ಇದು, ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶದೊಳಗಿನ ಘಟಕಗಳಿಗೆ ಅನುಮೋದನೆ ನೀಡುವುದಕ್ಕಾಗಿ ಮತ್ತು ಒಪ್ಪಿಗೆ ನೀಡಿಕೆಗೆ ಅನುಕೂಲ ಮಾಡಿಕೊಡುವ ಅಧಿಕಾರ ಹೊಂದಿರತಕ್ಕದ್ದು.

(ಐ) ಇದು, ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶದಲ್ಲಿಯ ಪ್ರಕಾರ್ಯಗಳು ಮತ್ತು ನಿರ್ವಹಣೆಯನ್ನು ಪುನರೀಕ್ಷಿಸತಕ್ಕದ್ದು.

(ಜೆ) ಇದು, ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶದಲ್ಲಿಯ ಮೂಲ ಸೌಕರ್ಯ/ ಸ್ವತ್ತುಗಳ ಬಳಕೆಗಾಗಿ, ಬಳಕೆದಾರ ಅಥವಾ ಸೇವಾ ಚಾರ್ಜುಗಳ ವಿಧಿಸುವಿಕೆಯನ್ನು ಅಥವಾ ಶುಲ್ಕಗಳು ಅಥವಾ ಬಾಡಿಗೆಯನ್ನು ನಿಯಂತ್ರಿಸತಕ್ಕದ್ದು.

(ಕೆ) ಇದು, ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶದೊಳಗೆ ವಿಶೇಷ ಸೇವೆಗಳಿಗಾಗಿ ವಿಶೇಷ ಉದ್ದೇಶ ವಾಹನಗಳನ್ನು (ಎಸ್‌ಪಿವಿಎಸ್) ವಹಿಸಿಕೊಡಲು, ಪ್ರವೇಶಿಸಲು ಅಥವಾ ಸೃಜಿಸಲು ಪ್ರಾಧಿಕಾರವನ್ನು ಪ್ರತ್ಯಾಯೋಜಿಸುವ ಅಧಿಕಾರವನ್ನು ಚಲಾಯಿಸತಕ್ಕದ್ದು.

(ಎಲ್) ಇದು, ನಿಯಮಿಸಬಹುದಾದಂಥ ಇತರ ಯಾವುದೇ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು.

(5) ವ್ಯವಸ್ಥಾಪನಾ ಮಂಡಳಿಯು ತಾನು ಗೊತ್ತುಪಡಿಸಬಹುದಾದಂಥ ಸ್ಥಳಗಳಲ್ಲಿ ಮತ್ತು ಅಂಥ ಅವಧಿಗಳಲ್ಲಿ ಸಭೆ ಸೇರತಕ್ಕದ್ದು ಮತ್ತು ತನ್ನದೇ ಆದ ಪ್ರಕ್ರಿಯೆಗಳನ್ನು ನಿಯಂತ್ರಿಸತಕ್ಕದ್ದು.

(6) ವ್ಯವಸ್ಥಾಪನಾ ಮಂಡಳಿಯ ಒಟ್ಟು ಸದಸ್ಯರ ಮೂರನೇ ಒಂದು ಭಾಗದಷ್ಟು ಸದಸ್ಯರು ಕೋರಂ ಆಗತಕ್ಕದ್ದು ಮತ್ತು ವ್ಯವಸ್ಥಾಪನಾ ಮಂಡಳಿಯ ಎಲ್ಲಾ ತೀರ್ಮಾನಗಳನ್ನು ಹಾಜರಿದ್ದ ಸದಸ್ಯರ ಬಹುಮತದಿಂದ ತೀರ್ಮಾನಿಸತಕ್ಕದ್ದು.

(7) ಮಂಡಳಿಯ ಯಾವುದೇ ಕಾರ್ಯ ಅಥವಾ ವ್ಯವಹರಣೆಗಳನ್ನು, ಮಂಡಳಿಯ ರಚನೆಯಲ್ಲಿಯ ಯಾವುದೇ ಖಾಲಿ ಸ್ಥಾನದ ಅಥವಾ ಯಾವುದೇ ನ್ಯೂನತೆಯ ಕಾರಣ ಮಾತ್ರದಿಂದಲೇ ಪ್ರಶ್ನಿಸತಕ್ಕದ್ದಲ್ಲ.

(8) ಮಂಡಳಿಯ ಎಲ್ಲಾ ಆದೇಶಗಳು ಮತ್ತು ತೀರ್ಮಾನಗಳನ್ನು ಹಾಗೂ ಇದು ಹೊರಡಿಸಿದ ಎಲ್ಲಾ ಇತರ ಲಿಖಿತ ಪತ್ರ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯ ಸಹಿಯ ಮೂಲಕ ಅಧಿಪ್ರಮಾಣಿಕರಿಸತಕ್ಕದ್ದು.

**9. ಮಂಡಳಿಯ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಯ ನೇಮಕ.–** ರಾಜ್ಯ ಸರ್ಕಾರವು ಭಾರತದ ಆಡಳಿತ ಸೇವೆಯ ಶ್ರೇಣಿಗೆ ಸೇರಿರುವ ಒಬ್ಬರು ಅಧಿಕಾರಿಯನ್ನು ಮಂಡಳಿಯ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಯನ್ನಾಗಿ ನೇಮಕ ಮಾಡತಕ್ಕದ್ದು. ಮುಖ್ಯ ಕಾರ್ಯ ನಿರ್ವಹಣಾ ಅಧಿಕಾರಿಯು ಮಂಡಳಿಯ ಸದಸ್ಯ ಕಾರ್ಯದರ್ಶಿಯಾಗಿರತಕ್ಕದ್ದು.

**10. ಮಂಡಳಿಯ ಮುಖ್ಯ ಕಾರ್ಯನಿರ್ವಹಣಾಧಿಕಾರಿಯ ಪ್ರಕಾರ್ಯಗಳು, ಅಧಿಕಾರಗಳು ಮತ್ತು ಕರ್ತವ್ಯಗಳು.–** (1) ಅಧಿನಿಯಮದ ಮತ್ತು ಅದರಡಿಯಲ್ಲಿ ರಚಿಸಲಾದ ನಿಯಮಗಳ ಉಪಬಂಧಗಳಿಗೆ ಒಳಪಟ್ಟು, ಮುಖ್ಯ ಕಾರ್ಯ ನಿರ್ವಹಣಾಧಿಕಾರಿಯು,–

(ಎ) ಮಂಡಳಿಯ ಉಪಾಧ್ಯಕ್ಷರ ಸಾಮಾನ್ಯ ಮೇಲ್ವಿಚಾರಣೆ ಮತ್ತು ನಿಯಂತ್ರಣಕ್ಕೆ ಒಳಪಟ್ಟು, ಮಂಡಳಿಯ ಅಧಿಕಾರಿಗಳು ಮತ್ತು ಸಿಬ್ಬಂದಿಗಳ ಮೇಲೆ ಆಡಳಿತಾತ್ಮಕ ನಿಯಂತ್ರಣವನ್ನು ಚಲಾಯಿಸತಕ್ಕದ್ದು;

(ಬಿ) ಮಂಡಳಿಯು ಆತನಿಗೆ ವಹಿಸಿಕೊಟ್ಟ ಎಲ್ಲಾ ಕಾರ್ಯಗಳ ನಿರ್ವಹಣೆಯ ಮೇಲ್ವಿಚಾರಣೆ ಮತ್ತು ನಿಯಂತ್ರಣವನ್ನು ಹೊಂದಿರತಕ್ಕದ್ದು;

(ಸಿ) ಮಂಡಳಿಯ ಸಭೆಗಳ ನಡವಳಿಗಳಿಗೆ ಸಂಬಂಧಪಟ್ಟ ಎಲ್ಲಾ ಕಾಗದಗಳ ಮತ್ತು ದಾಖಲೆಗಳ ಅಭಿರಕ್ಷೆಯನ್ನು ಹೊಂದಿರತಕ್ಕದ್ದು;

(ಡಿ) ಮಂಡಳಿಯ ನಿಧಿಯಿಂದ ಹಣವನ್ನು ತೆಗೆಯತಕ್ಕದ್ದು ಮತ್ತು ಬಟವಾಡೆ ಮಾಡತಕ್ಕದ್ದು; ಮತ್ತು

(ಇ) ನಿಯಮಿಸಬಹುದಾದಂಥ ಇತರ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು.

(2) ಮುಖ್ಯ ಕಾರ್ಯನಿರ್ವಹಣಾಧಿಕಾರಿಯು ಮಂಡಳಿಯ ಪ್ರತಿಯೊಂದು ಸಭೆಗೂ ಹಾಜರಾಗತಕ್ಕದ್ದು ಮತ್ತು ಅಂಥ ಸಭೆಯ ನಡವಳಿಗಳನ್ನು ದಾಖಲ್ಮಾಡುವಂತೆ ಮಾಡತಕ್ಕದ್ದು.

**11. ಮಂಡಳಿಯ ಅಧಿಕಾರಿಗಳು ಮತ್ತು ಸಿಬ್ಬಂದಿ.–** (1) ನಿರ್ದಿಷ್ಟ ಪಡಿಸಬಹುದಾದಂಥ ವಿನಿಯಮಗಳಿಗೆ ಒಳಪಟ್ಟು, ಮಂಡಳಿಯು, ತನ್ನ ಉದ್ದೇಶಕ್ಕಾಗಿ ಅವಶ್ಯವಾದಂಥ ಅಧಿಕಾರಿಗಳು ಮತ್ತು ಸಿಬ್ಬಂದಿಯನ್ನು ನೇಮಕ ಮಾಡಬಹುದು.

(2) (1)ನೇ ಉಪ ಪ್ರಕರಣದಲ್ಲಿ ಉಲ್ಲೇಖಿಸಲಾದ ಅಧಿಕಾರಿಗಳು ಮತ್ತು ಸಿಬ್ಬಂದಿಗಳ ಸೇವಾ ಉಪಲಬ್ಧಿಗಳು, ಭತ್ಯೆಗಳು ಮತ್ತು ಇತರ ಷರತ್ತುಗಳು, ವಿನಿಯಮಗಳ ಅಡಿಯಲ್ಲಿ ಮಂಡಳಿಯು ನಿರ್ದಿಷ್ಟಪಡಿಸಬಹುದಾದಂತೆ ಇರತಕ್ಕದ್ದು.

**12. ರಾಜ್ಯ ಮಟ್ಟದ ಅಧಿಕಾರವುಳ್ಳ ಸಮಿತಿಯ ರಚನೆ ಮತ್ತು ಅದರ ಪ್ರಕಾರ್ಯಗಳು.–** ರಾಜ್ಯ ಸರ್ಕಾರವು, ಈ ಮುಂದಿನವರನ್ನು ಒಳಗೊಂಡ, ಒಂದು ರಾಜ್ಯ ಮಟ್ಟದ ಅಧಿಕಾರವುಳ್ಳ ಸಮಿತಿಯನ್ನು ರಚಿಸತಕ್ಕದ್ದು, ಎಂದರೆ:–

| | |
|---|---|
| (ಎ) ಮಾನ್ಯ ಮುಖ್ಯ ಮಂತ್ರಿಗಳು | – ಅಧ್ಯಕ್ಷರು |
| (ಬಿ) ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನದ ಪ್ರಭಾರದಲ್ಲಿರುವ ಸಚಿವರು | – ಉಪಾಧ್ಯಕ್ಷರು |
| (ಸಿ) ಬೃಹತ್ ಮತ್ತು ಮಧ್ಯಮ ಕೈಗಾರಿಕೆಗಳ ಪ್ರಭಾರದಲ್ಲಿರುವ ಸಚಿವರು | – ಸದಸ್ಯರು |
| (ಡಿ) ಕರ್ನಾಟಕ ಸರ್ಕಾರದ ಮುಖ್ಯ ಕಾರ್ಯದರ್ಶಿಗಳು | – ಸದಸ್ಯರು |
| (ಇ) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ | – ಸದಸ್ಯ ಕಾರ್ಯದರ್ಶಿ |

(2) ರಾಜ್ಯ ಮಟ್ಟದ ಅಧಿಕಾರವುಳ್ಳ ಸಮಿತಿಯು ಈ ಮುಂದಿನ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು, ಎಂದರೆ:–

(ಎ) ಇದು, ಪ್ರತಿಯೊಂದು ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶದ ಪ್ರಕಾರ್ಯಗಳ ಮತ್ತು ನಿರ್ವಹಣೆಯ ಮೇಲ್ವಿಚಾರಣೆ, ಪುನರೀಕ್ಷಣೆ ಮತ್ತು ಮೌಲ್ಯಮಾಪನ ಮಾಡತಕ್ಕದ್ದು; ಮತ್ತು

(ಬಿ) ಸ್ಟೇಕ್ ಹೋಲ್ಡರುಗಳ ನಡುವಿನ ವಿವಾದಗಳಿಗೆ ಸಂಬಂಧಪಟ್ಟ ವಿಷಯಗಳ ಬಗ್ಗೆ ವ್ಯವಹರಿಸುವುದು; ಮತ್ತು

(ಸಿ) ನಿಯಮಿಸಬಹುದಾದ ಯಾವುದೇ ಇತರ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು.

## ಅಧ್ಯಾಯ – V

## ಮಂಡಳಿಯ ನಿಧಿ

**13. ಮಂಡಳಿಯ ನಿಧಿ.–** (1) ಮಂಡಳಿಯು, ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶ ನಿಧಿ ಎಂದು ಕರೆಯಲಾಗುವ ನಿಧಿಯನ್ನು ಹೊಂದಿರತಕ್ಕದ್ದು.

(2) ಮಂಡಳಿಯು, ಈ ಅಧಿನಿಯಮದ ಎಲ್ಲಾ ಅಥವಾ ಯಾವುವೇ ಉದ್ದೇಶಗಳಿಗಾಗಿ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರ ಅಥವಾ ಒಂದು ಸ್ಥಳೀಯ ಪ್ರಾಧಿಕಾರ ಅಥವಾ ಯಾವೊಬ್ಬ ವ್ಯಕ್ತಿ ಅಥವಾ ನಿಗಮಿತವಾಗಿರುವ ಅಥವಾ ಆಗದಿರುವ ನಿಕಾಯದಿಂದ ಅನುದಾನಗಳು, ಧನಸಹಾಯಗಳು, ದೇಣಿಗೆಗಳು ಮತ್ತು ದಾನಗಳನ್ನು ಸ್ವೀಕರಿಸಬಹುದು.

(3) ಈ ಅಧಿನಿಯಮದ ಬಲದಿಂದಾಗಿ ಮಂಡಳಿಯು ಅಥವಾ ಅದರ ಪರವಾಗಿ ಸ್ವೀಕರಿಸಲಾದ ಎಲ್ಲಾ ಹಣ, ಮಂಡಳಿಯು ಮಾರಾಟಮಾಡಿದ ಭೂಮಿ ಅಥವಾ ಯಾವುದೇ ಇತರ ವಸ್ತು ಅಥವಾ ಸ್ವತ್ತಿನ ಉತ್ಪತ್ತಿ, ಮಂಡಳಿಗೆ ಪ್ರಾಪ್ತವಾಗುವ ಎಲ್ಲಾ ಬಾಡಿಗೆಗಳು, ಮತ್ತು ಎಲ್ಲಾ ಬಡ್ಡಿಗಳು, ಲಾಭಗಳು ಮತ್ತು ಇತರ ಹಣ, ಇವು ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶ ನಿಧಿಯಾಗಿರತಕ್ಕದ್ದು.

(4) ರಾಜ್ಯ ಸರ್ಕಾರವು ಅನ್ಯಥಾ ನಿರ್ದೇಶಿಸಿದ ಹೊರತು, ಪೂರ್ವೋಕ್ತ ಉಪಬಂಧಗಳಲ್ಲಿ ನಿರ್ದಿಷ್ಟ ಪಡಿಸಲಾದ ಮತ್ತು ಮಂಡಳಿಯ ನಿಧಿಯ ಭಾಗವಾಗಿರುವ ಎಲ್ಲಾ ಹಣ ಮತ್ತು ಸ್ವೀಕೃತಿಗಳನ್ನು ಭಾರತೀಯ ರಿಸರ್ವ್ ಬ್ಯಾಂಕು ಅಥವಾ ಯಾವುದೇ ಅನುಸೂಚಿತ ಬ್ಯಾಂಕುಗಳಲ್ಲಿ ಠೇವಣಿ ಇಡತಕ್ಕದ್ದು ಅಥವಾ ರಾಜ್ಯ ಸರ್ಕಾರವು ಅನುಮೋದಿಸಬಹುದಾದಂಥ ಭದ್ರತೆಗಳಲ್ಲಿ ಹೂಡಿಕೆ ಮಾಡತಕ್ಕದ್ದು.

**14. ನಿಧಿಯ ವಿನಿಯೋಗ.–** ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು, ಮಂಡಳಿಯ ಎಲ್ಲಾ ಸ್ವತ್ತು ಮತ್ತು ನಿಧಿಗಳು ಹಾಗೂ ಮಂಡಳಿಯಲ್ಲಿ ನಿಹಿತವಾಗುವ ಇತರ ಎಲ್ಲಾ ಆಸ್ತಿಗಳನ್ನು ಈ ಅಧಿನಿಯಮದ ಉದ್ದೇಶಗಳಿಗಾಗಿ ಧಾರಣಮಾಡತಕ್ಕದ್ದು ಮತ್ತು ವಿನಿಯೋಗಿಸತಕ್ಕದ್ದು.

**15. ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ.–** (1) ಮಂಡಳಿಯು, ಈ ಅಧಿನಿಯಮದಡಿಯಲ್ಲಿನ ನಿಯಮಗಳು ಅಗತ್ಯಪಡಿಸಬಹುದಾದಂತೆ ಸರಿಯಾದ ಲೆಕ್ಕ ಪುಸ್ತಕಗಳನ್ನು ಮತ್ತು ಇತರ ಪುಸ್ತಕಗಳನ್ನು ನಿರ್ವಹಿಸತಕ್ಕದ್ದು ಮತ್ತು ಅಂಥ ನಿಯಮಗಳಿಗನುಸಾರ ಒಂದು ವಾರ್ಷಿಕ ಲೆಕ್ಕ ವಿವರಣಾ ಪತ್ರವನ್ನು ತಯಾರಿಸತಕ್ಕದ್ದು.

(2) ಮಂಡಳಿಯು ರಾಜ್ಯ ಸರ್ಕಾರವು ನಿರ್ದೇಶಿಸಬಹುದಾದಂಥ ವ್ಯಕ್ತಿಗಳಿಂದ ತನ್ನ ವಾರ್ಷಿಕ ಲೆಕ್ಕಪತ್ರಗಳನ್ನು ಲೆಕ್ಕ ಪರಿಶೋಧನೆ ಮಾಡಿಸತಕ್ಕದ್ದು.

(3) ಮಂಡಳಿಯ ಲೆಕ್ಕಪತ್ರಗಳನ್ನು ಪರಿಶೋಧಿಸಿದ ತರುವಾಯ ಆದಷ್ಟು ಬೇಗನೆ ಮಂಡಳಿಯು ಅದರ ಪ್ರತಿಯನ್ನು ಲೆಕ್ಕಪರಿಶೋಧಕರ ವರದಿಯ ಪ್ರತಿಯೊಂದಿಗೆ ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು ಮತ್ತು ನಿಯಮಿಸಲಾದ ರೀತಿಯಲ್ಲಿ ಲೆಕ್ಕಪತ್ರಗಳನ್ನು ಪ್ರಕಟಿಸುವಂತೆ ಮಾಡತಕ್ಕದ್ದು ಮತ್ತು ಅದರ ಪ್ರತಿಗಳನ್ನು ಸೂಕ್ತ ಬೆಲೆಗೆ ಮಾರಾಟಕ್ಕೆ ಇಡತಕ್ಕದ್ದು. ರಾಜ್ಯ ಸರ್ಕಾರದಿಂದ ಅವುಗಳನ್ನು ಸ್ವೀಕರಿಸಿದ ತರುವಾಯ ಆದಷ್ಟು ಬೇಗನೆ, ಲೆಕ್ಕಪರಿಶೋಧಿತ ಲೆಕ್ಕಪತ್ರಗಳು ಮತ್ತು ವರದಿಯನ್ನು ರಾಜ್ಯ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ ಮಂಡಿಸತಕ್ಕದ್ದು.

(4) ರಾಜ್ಯ ಸರ್ಕಾರವು, ಲೆಕ್ಕಪತ್ರಗಳನ್ನು ಮತ್ತು ಲೆಕ್ಕಪರಿಶೋಧಕರ ವರದಿಯನ್ನು ಪರಿಶೀಲಿಸಿದ ತರುವಾಯ, ನೀಡಬಹುದಾದಂಥ ನಿರ್ದೇಶನಗಳನ್ನು ಮಂಡಳಿಯು ಪಾಲಿಸತಕ್ಕದ್ದು.

**16. ವಾರ್ಷಿಕ ವರದಿ.–** ಮಂಡಳಿಯು, ಪ್ರತಿವರ್ಷದ ಮುಕ್ತಾಯದ ತರುವಾಯ, ನಿಯಮಿಸಬಹುದಾದಂಥ ನಮೂನೆಯಲ್ಲಿ ಮತ್ತು ಅಂಥ ದಿನಾಂಕದೊಳಗೆ, ಅಂಥ ವರ್ಷದ ಅವಧಿಯಲ್ಲಿ ತನ್ನ ಚಟುವಟಿಕೆಗಳ ಒಂದು ವರದಿಯನ್ನು ತಯಾರಿಸತಕ್ಕದ್ದು ಹಾಗೂ ಅದನ್ನು ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು ಮತ್ತು ರಾಜ್ಯ ಸರ್ಕಾರವು ಅಂಥ ವರದಿಯ ಪ್ರತಿಯನ್ನು ರಾಜ್ಯ ವಿಧಾನಮಂಡಲದ ಉಭಯ ಸದನಗಳ ಮುಂದೆ ಮಂಡಿಸುವಂತೆ ಮಾಡತಕ್ಕದ್ದು.

## ಅಧ್ಯಾಯ – VI

## ದಂಡಗಳು

**17. ದಂಡಗಳು.–** (1) ಮಂಡಳಿಯು, ಯಾವುದೇ ಸಮಯದಲ್ಲಿ ಅಭಿವೃದ್ಧಿಗಾರನು,–

(ಎ) ಈ ಅಧಿನಿಯಮದ ಅಥವಾ ಅದರಡಿಯಲ್ಲಿ ರಚಿಸಲಾದ ನಿಯಮಗಳ ಉಪಬಂಧಗಳಡಿಯಲ್ಲಿ, ಆತನಿಗೆ ವಿಧಿಸಲಾದ ಪ್ರಕಾರ್ಯಗಳನ್ನು ನಿರ್ವಹಿಸಲು ಅಥವಾ ಕರ್ತವ್ಯಗಳನ್ನು ನೆರವೇರಿಸಲು ಅಸಮರ್ಥನೆಂದು; ಅಥವಾ

(ಬಿ) ಈ ಅಧಿನಿಯಮದಡಿಯಲ್ಲಿ ನೀಡಲಾದ ಯಾವುದೇ ನಿರ್ದೇಶನವನ್ನು ಪಾಲಿಸುವುದಕ್ಕೆ ನಿರಂತರವಾಗಿ ತಪ್ಪಿರುವನೆಂದು; ಅಥವಾ

(ಸಿ) ಒಪ್ಪಂದದ ನಿಬಂಧನೆಗಳನ್ನು ಮತ್ತು ಷರತ್ತುಗಳನ್ನು ಉಲ್ಲಂಘಿಸಿರುವನೆಂದು; ಅಥವಾ

(ಡಿ) ಒಪ್ಪಂದದ ಮೂಲಕ ವಿಧಿಸಲಾದ ಕರ್ತವ್ಯಗಳನ್ನು ಮತ್ತು ಹೊಣೆಗಾರಿಕೆಗಳನ್ನು ಆತನ ಹಣಕಾಸು ಪರಿಸ್ಥಿತಿಯು ಸಂಪೂರ್ಣವಾಗಿ ಮತ್ತು ಸಮರ್ಪಕವಾಗಿ ನೆರವೇರಿಸಲು ಅಸಮರ್ಥನನ್ನಾಗಿ ಮಾಡಿದೆ ಎಂದು ಹಾಗೂ ಸಾರ್ವಜನಿಕ ಹಿತಾಸಕ್ತಿಯಲ್ಲಿ, ಹಾಗೆ ಮಾಡುವುದನ್ನು ಅವಶ್ಯಕಗೊಳಿಸುವಂಥ ಸನ್ನಿವೇಶಗಳು ಉಂಟಾಗಿವೆಯೆಂದು,

– ಅಭಿಪ್ರಾಯಪಟ್ಟಲ್ಲಿ, ಮಂಡಳಿಯು, ಅರ್ಜಿಯ ಮೇಲೆ, ಅಥವಾ ಅಭಿವೃದ್ಧಿಗಾರನ ಒಪ್ಪಿಗೆಯಿಂದ ಅಥವಾ ಇಲ್ಲದೇ, ಲಿಖಿತದಲ್ಲಿ ಕಾರಣಗಳನ್ನು ದಾಖಲಿಸಿ, ಅಭಿವೃದ್ಧಿಗಾರನಿಗೆ ಮಂಜೂರಾಗಿದ್ದ ಒಪ್ಪಂದವನ್ನು ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶದಲ್ಲಿ ಸ್ಥಾಪಿಸಲಾದ ತನ್ನ ಪ್ರದೇಶದಲ್ಲಿ ಪೂರ್ಣ ಅಥವಾ ಭಾಗಕ್ಕಾಗಿ ಒಂದು ವರ್ಷಕ್ಕೆ ಮೀರದ ಅವಧಿಯವರೆಗೆ ಅಮಾನತ್ತುಗೊಳಿಸಬಹುದು ಮತ್ತು (2)ನೇ ಉಪ ಪ್ರಕರಣದಡಿಯಲ್ಲಿ ಹೇಳಿರುವಂತೆ ಸಹ ಮುಂದುವರೆಯಬಹುದು.

(2) ಈ ಅಧಿನಿಯಮ ಅಥವಾ ಅದರಡಿಯಲ್ಲಿ ರಚಿಸಲಾದ ನಿಯಮಗಳು ಅಥವಾ ವಿನಿಯಮಗಳ ಉಪಬಂಧಗಳನ್ನು ಉಲ್ಲಂಘಿಸುವ ಯಾರೊಬ್ಬರು, ಅಪರಾಧ ನಿರ್ಣಯವಾದ ಮೇಲೆ, ಆತನು, ಒಂದು ತಿಂಗಳವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ ಐವತ್ತು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯೊಂದಿಗೆ ದಂಡಿತನಾಗತಕ್ಕದ್ದು.

(3) (2)ನೇ ಉಪ ಪ್ರಕರಣದ ಅಡಿಯಲ್ಲಿ ಅಪರಾಧ ನಿರ್ಣೀತನಾದ ಒಬ್ಬ ವ್ಯಕ್ತಿಯು, ಮಂಡಳಿಗೆ ಉಂಟಾದ ನಷ್ಟವನ್ನು ತುಂಬಿಕೊಡಲು ಬದ್ಧನಾಗಿರತಕ್ಕದ್ದು, ತಪ್ಪಿದಲ್ಲಿ ಮೊತ್ತವನ್ನು ಅಂಥ ವ್ಯಕ್ತಿಯಿಂದ ಭೂ ಕಂದಾಯ ಬಾಕಿಗಳಂತೆ ವಸೂಲ್ಮಾಡಬಹುದು.

**18. ಗುತ್ತಿಗೆಯ ನಿಬಂಧನೆಗಳನ್ನು ಅಥವಾ ಷರತ್ತುಗಳನ್ನು ಉಲ್ಲಂಘಿಸಿದಾಗ ಅಥವಾ ಅಧಿಕಾರವಿಲ್ಲದೇ ಅವುಗಳನ್ನು ಧಾರಣ ಮಾಡಿದಾಗ ವಾಸಸ್ಥಳದ ಸ್ವತ್ತುಗಳು ಒಳಗೊಂಡಂತೆ ಆವರಣಗಳ ಸ್ವಾಧೀನತೆಯನ್ನು ಪುನರಾರಂಭಿಸುವುದು.–** (1) ಒಂದು ಕೈಗಾರಿಕಾ ಪ್ರದೇಶದಲ್ಲಿ ಅಥವಾ ಕೈಗಾರಿಕಾ ಎಸ್ಟೇಟಿನಲ್ಲಿ ಯಾವುವೇ ಆವರಣಗಳ ಅಥವಾ ಅದರ ಭಾಗದ ಅಥವಾ ವಾಸಸ್ಥಳದ ಸ್ವತ್ತಿನ ಹಂಚಿಕೆ ಪಡೆದವನು, ಹಂಚಿಕೆಯ ಯಾವುವೇ ನಿಬಂಧನೆಗಳನ್ನು ಅಥವಾ ಷರತ್ತುಗಳನ್ನು ಉಲ್ಲಂಘಿಸಿರುವನೆಂದು ಅಥವಾ ಯಾವುದೇ ಅಧಿಕಾರವಿಲ್ಲದೇ ಅದನ್ನು ಧಾರಣ ಮಾಡಿರುವನೆಂದು ಮಂಡಳಿಯು ಅಭಿಪ್ರಾಯ ಪಟ್ಟಲ್ಲಿ, ಅದು, 17ನೇ ಪ್ರಕರಣಕ್ಕೆ ಪ್ರತಿಕೂಲವಾಗದಂತೆ, ಅಂಥ ಹಂಚಿಕೆ ಪಡೆದವನಿಗೆ ಮತ್ತು ಯಾರ ಪರವಾಗಿ, ಮಂಡಳಿಯು ಆವರಣಗಳ ಅಥವಾ ವಾಸಸ್ಥಳದ ಸ್ವತ್ತಿನ, ಅಡಮಾನ ಅಥವಾ ಗುತ್ತಿಗೆ ಧಾರಣಾಧಿಕಾರಕ್ಕೆ ಅನುಮತಿ ನೀಡಿದೆಯೋ ಆ ಬ್ಯಾಂಕು ಅಥವಾ ಹಣಕಾಸು ಸಂಸ್ಥೆಗಳಿಗೆ ಹಂಚಿಕೆಯ ನಿಬಂಧನೆಗಳ ಮತ್ತು ಷರತ್ತುಗಳ ಉಲ್ಲಂಘನೆಯನ್ನು ನಿರ್ದಿಷ್ಟಪಡಿಸಿ, ಮಂಡಳಿಯು ನೋಟೀಸಿನಲ್ಲಿ ಗೊತ್ತುಪಡಿಸಿದ ಅವಧಿಯೊಳಗೆ, ಅಂಥ ಉಲ್ಲಂಘನೆಗಳಿಗೆ ಪರಿಹಾರ ನೀಡುವಂತೆ ಹಂಚಿಕೆ ಪಡೆದವನನ್ನು ಕೋರುವ ನೋಟೀಸನ್ನು ನೀಡತಕ್ಕದ್ದು.

(2) ಹಾಗೆ ಗೊತ್ತುಪಡಿಸಲಾದ ಅವಧಿಯೊಳಗೆ ಹಂಚಿಕೆ ಪಡೆದವನು, ಉಲ್ಲಂಘನೆಗಳಿಗಾಗಿ ಪರಿಹಾರವನ್ನು ನೀಡಲು ತಪ್ಪಿದಲ್ಲಿ, ಮಂಡಳಿಯು, ಆವರಣಗಳ ಅಥವಾ ಅದರ ಭಾಗದ ಅಥವಾ ವಾಸಸ್ಥಳ ಸ್ವತ್ತಿನ ಸ್ವಾಧೀನವನ್ನು ಏಕೆ ಪುನರಾರಂಭಿಸಬಾರದು ಎಂದು ಜಾರಿಗೊಳಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗೆ ಕಾರಣ ತೋರಿಸುವಂತೆ ನೋಟೀಸನ್ನು, ಅಂಥ ಬ್ಯಾಂಕು ಅಥವಾ ಹಣಕಾಸು ಸಂಸ್ಥೆಗಳಿಗೆ ತಿಳಿಸಿ, ಹಂಚಿಕೆ ಪಡೆದವನಿಗೆ, ನೋಟೀಸನ್ನು ಜಾರಿ ಮಾಡತಕ್ಕದ್ದು.

(3) ಹಂಚಿಕೆ ಪಡೆದವನು ಯಾವುದಾದರೂ ಕಾರಣವನ್ನು ನೀಡಿದ್ದಲ್ಲಿ, ಅದನ್ನು ಪರಿಗಣಿಸಿದ ತರುವಾಯ ಮತ್ತು ಆತನಿಗೆ ತನ್ನ ಅಹವಾಲನ್ನು ಹೇಳಿಕೊಳ್ಳಲು ಅವಕಾಶವನ್ನು ಕೊಟ್ಟ ತರುವಾಯ, ಮಂಡಳಿಯು, ತಾನು ಸೂಕ್ತವೆಂದು ಭಾವಿಸುವ ಅಂಥ ಆದೇಶಗಳನ್ನು ಹೊರಡಿಸಬಹುದು.

(4) ಮಂಡಳಿಯು, (3)ನೇ ಉಪ ಪ್ರಕರಣದ ಅಡಿಯಲ್ಲಿ ಒಂದು ಆದೇಶವನ್ನು ಹೊರಡಿಸಿದಲ್ಲಿ, ಕೈಗಾರಿಕಾ ಪ್ರದೇಶದಲ್ಲಿನ ವಾಸಸ್ಥಳ ಸ್ವತ್ತು ಒಳಗೊಂಡಂತೆ ಆವರಣಗಳ ಅಥವಾ ಅದರ ಭಾಗದ ಸ್ವಾಧೀನತೆಯನ್ನು ಪುನರಾರಂಭಿಸುವುದಕ್ಕಾಗಿ, ಅದು, ಲಿಖಿತ ನೋಟೀಸಿನ ಮೂಲಕ, ಯಾವೊಬ್ಬ ಹಂಚಿಕೆ ಪಡೆದವನಿಗೆ, ನೋಟಿಸಿನಲ್ಲಿ ನಿರ್ದಿಷ್ಟಪಡಿಸಲಾದ ದಿನಾಂಕದೊಳಗೆ ಮಂಡಳಿಗೆ ಅಥವಾ ಈ ಬಗ್ಗೆ ಅಧಿಕೃತನಾದ ಯಾವೊಬ್ಬ ವ್ಯಕ್ತಿಗೆ, ಬಿಟ್ಟುಕೊಡುವಂತೆ ಅಥವಾ ಅದರ ಸ್ವಾಧೀನತೆಯನ್ನು ಒಪ್ಪಿಸುವಂತೆ ಆದೇಶ ನೀಡಬಹುದು.

(5) ಯಾವೊಬ್ಬ ಹಂಚಿಕೆ ಪಡೆದವನು, ನೋಟೀಸಿನಲ್ಲಿ ನಿರ್ದಿಷ್ಟ ಪಡಿಸಲಾದ ಅವಧಿಯೊಳಗೆ, ವಾಸಸ್ಥಳ ಸ್ವತ್ತು ಒಳಗೊಂಡಂತೆ ಆವರಣಗಳ ಅಥವಾ ಅದರ ಭಾಗದ ಸ್ವಾಧೀನತೆಯನ್ನು ಬಿಟ್ಟುಕೊಡಲು ಅಥವಾ ಒಪ್ಪಿಸಲು ನಿರಾಕರಿಸಿದಲ್ಲಿ, ಮಂಡಳಿಯು ಅಥವಾ ಈ ಸಂಬಂಧದಲ್ಲಿ ಅದರಿಂದ ಅಧಿಕೃತನಾದ ಯಾವೊಬ್ಬ ಅಧಿಕಾರಿಯು, ಎಲ್ಲಾ ಋಣಗಳಿಂದ ಮುಕ್ತವಾದ, ವಾಸಸ್ಥಳ ಸ್ವತ್ತು ಒಳಗೊಂಡ ಆವರಣಗಳ ಅಥವಾ ಅದರ ಭಾಗದ ಸ್ವಾಧೀನತೆಯನ್ನು ಪುನರಾರಂಭಿಸಬಹುದು ಮತ್ತು ಈ ಉದ್ದೇಶಕ್ಕಾಗಿ ಅವಶ್ಯವಾಗಬಹುದಾದಂಥ ಬಲವನ್ನು ಉಪಯೋಗಿಸಬಹುದು.

**19. ವಿವಾದವನ್ನು ಒಪ್ಪಿಸುವುದು.–** (1) ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶದಲ್ಲಿ, ಮಂಡಳಿ ಮತ್ತು ಅಭಿವೃದ್ಧಿದಾರರು ಅಥವಾ ಸಹ–ಅಭಿವೃದ್ಧಿದಾರರು ಅಥವಾ ಘಟಕಗಳು ಅಥವಾ ಉದ್ದಿಮೆದಾರರು ಇವರುಗಳ ನಡುವೆ, ಇಬ್ಬರು ಅಥವಾ ಹೆಚ್ಚಿನ ಅಭಿವೃದ್ಧಿದಾರರು, ಸಹ ಅಭಿವೃದ್ಧಿದಾರರಲ್ಲಿ ಅಥವಾ ಅಭಿವೃದ್ಧಿದಾರ ಮತ್ತು ಉದ್ದಿಮೆದಾರರು ಅಥವಾ ಘಟಕಗಳ ನಡುವೆ ಸಿವಿಲ್ ಸ್ವರೂಪದ ಯಾವುದೇ ವಿವಾದವು ಉದ್ಭವಿಸಿದಲ್ಲಿ, ಅಂಥಾ ವಿವಾದವನ್ನು ಒಬ್ಬರು ಮಧ್ಯಸ್ಥಗಾರರಿಗೆ ಒಪ್ಪಿಸತಕ್ಕದ್ದು.

(2) ಮಧ್ಯಸ್ಥಗಾರಿಕೆ ಮತ್ತು ಸಂಧಾನ ಅಧಿನಿಯಮ, 1996ರ ಉಪಬಂಧಗಳು ಮಧ್ಯಸ್ಥಗಾರಿಕೆ ಮತ್ತು ಸಂಧಾನ ಅಧಿನಿಯಮ, 1996ರ ಉಪಬಂಧಗಳ ಅಡಿಯಲ್ಲಿಯ ಇತ್ಯರ್ಥ ಅಥವಾ ತೀರ್ಮಾನದಲ್ಲಿ ಉಲ್ಲೇಖವಾದ ಮಧ್ಯಸ್ಥಗಾರಿಕೆಯ ನಡವಳಿಗಳಾಗಿದ್ದರೆ ಹೇಗೋ ಹಾಗೆ ಈ ಅಧಿನಿಯಮದಡಿಯ ಎಲ್ಲಾ ಮಧ್ಯಸ್ಥಗಾರಿಕೆಗೆ, ಅನ್ವಯವಾಗತಕ್ಕದ್ದು.

(3) ಮಧ್ಯಸ್ಥಗಾರಿಕೆಗೆ ಒಪ್ಪಿಸಬೇಕಾದ ಯಾವುದೇ ವಿವಾದದ ಸಂದರ್ಭದಲ್ಲಿ ಕಾಲಮಿತಿಯು, ವಿವಾದವು ಒಂದು ದಾವೆ ಹಾಗೂ ಮಧ್ಯಸ್ಥಗಾರನು ಒಂದು ಸಿವಿಲ್ ನ್ಯಾಯಾಲಯವಾಗಿದ್ದರೆ ಹೇಗೋ ಹಾಗೆ ಅವಧಿ ಪರಿಮಿತಿ ಅಧಿನಿಯಮ, 1963ರ ಉಪಬಂಧಗಳ ಮೂಲಕ ನಿಯಂತ್ರಿತವಾಗತಕ್ಕದ್ದು.

**20. ಕಂಪೆನಿಗಳಿಂದ ಅಪರಾಧಗಳು.–** (1) ಈ ಅಧಿನಿಯಮದ ಅಡಿಯಲ್ಲಿ ಒಂದು ಅಪರಾಧವನ್ನು ಮಾಡುವ ವ್ಯಕ್ತಿಯು ಒಂದು ಕಂಪೆನಿಯಾಗಿದ್ದರೆ, ಅಪರಾಧ ನಡೆದ ಕಾಲದಲ್ಲಿ ಕಂಪೆನಿಯ ಆಡಳಿತವನ್ನು ಹೊಂದಿದ್ದ ಮತ್ತು ಅದರ ವ್ಯವಹಾರಗಳನ್ನು ನಡೆಸುವ ಬಗ್ಗೆ ಕಂಪೆನಿಗೆ ಹೊಣೆಗಾರನಾಗಿದ್ದ ಪ್ರತಿಯೊಬ್ಬ ವ್ಯಕ್ತಿಯನ್ನು ಹಾಗೂ ಕಂಪೆನಿಯನ್ನು ಆ ಅಪರಾಧದ ಬಗ್ಗೆ

ತಪ್ಪಿತಸ್ಥರೆಂದು ಭಾವಿಸತಕ್ಕದ್ದು ಮತ್ತು ಅವರ ವಿರುದ್ಧ ವ್ಯವಹರಣೆ ನಡೆಸುವುದಕ್ಕೆ ಹಾಗೂ ಅದಕ್ಕನುಸಾರವಾಗಿ ದಂಡನೆಗೆ ಅವರು ಗುರಿಯಾಗತಕ್ಕದ್ದು:

ಪರಂತು, ಈ ಉಪ-ಪ್ರಕರಣದಲ್ಲಿ ಇರುವುದು ಯಾವುದೂ, ಅಪರಾಧವು ತನ್ನ ಗಮನಕ್ಕೆ ಬರದೇ ನಡೆಯಿತೆಂದು ಅಥವಾ ಅಂಥ ಅಪರಾಧವು ನಡೆಯುವುದನ್ನು ತಡೆಗಟ್ಟಲು ತಾನು ಎಲ್ಲಾ ಯುಕ್ತ ಜಾಗರೂಕತೆಯನ್ನು ವಹಿಸಿದ್ದೆನೆಂದು ಅಂಥ ವ್ಯಕ್ತಿಯು ರುಜುವಾತುಪಡಿಸಿದರೆ, ಅಂಥ ಯಾವೊಬ್ಬ ವ್ಯಕ್ತಿಯನ್ನು ಈ ಅಧಿನಿಯಮದ ಅಡಿಯಲ್ಲಿ ಯಾವುದೇ ದಂಡನೆಗೆ ಗುರಿಯಾಗುವಂತೆ ಮಾಡತಕ್ಕದ್ದಲ್ಲ.

(2) (1)ನೇ ಉಪ-ಪ್ರಕರಣದಲ್ಲಿ ಏನೇ ಇದ್ದರೂ, ಈ ಅಧಿನಿಯಮದ ಅಡಿಯಲ್ಲಿನ ಅಪರಾಧವನ್ನು ಕಂಪನಿಯು ಮಾಡಿರುವಲ್ಲಿ ಮತ್ತು ಆ ಅಪರಾಧವು ಆ ಕಂಪನಿಯ ಯಾವೊಬ್ಬ ನಿರ್ದೇಶಕನ, ವ್ಯವಸ್ಥಾಪಕನ, ಕಾರ್ಯದರ್ಶಿಯ ಅಥವಾ ಇತರ ಅಧಿಕಾರಿಯ ಸಮ್ಮತಿಯಿಂದ ನಡೆಯಿತೆಂದು ಅಥವಾ ಪರೋಕ್ಷ ಸಮ್ಮತಿಯಿಂದ ನಡೆಯಿತೆಂದು ಅಥವಾ ಆ ಅಪರಾಧ ನಡೆಯುವುದಕ್ಕೆ ಅವನ ಯಾವುದೇ ನಿರ್ಲಕ್ಷತೆ ಕಾರಣವೆಂದು ರುಜುವಾತು ಆದಲ್ಲಿ, ಅಂಥ ನಿರ್ದೇಶಕನು, ವ್ಯವಸ್ಥಾಪಕನು, ಕಾರ್ಯದರ್ಶಿಯು ಅಥವಾ ಇತರ ಅಧಿಕಾರಿಯು ಸಹ ಅಂಥ ಅಪರಾಧದ ದೋಷಿಯೆಂದು ಭಾವಿಸತಕ್ಕದ್ದು ಮತ್ತು ಅವನ ವಿರುದ್ಧ ವ್ಯವಹರಣೆ ನಡೆಸುವುದಕ್ಕೆ ಹಾಗೂ ಅದಕ್ಕನುಸಾರವಾಗಿ ದಂಡನೆಗೆ ಅವನು ಗುರಿಯಾಗತಕ್ಕದ್ದು.

**ವಿವರಣೆ:** ಈ ಪ್ರಕರಣದ ಉದ್ದೇಶಗಳಿಗಾಗಿ,-

(ಎ) **"ಕಂಪನಿ"** ಎಂದರೆ, ಒಂದು ನಿಗಮಿತ ನಿಕಾಯ ಮತ್ತು ಅದು ಫರ್ಮ್‌ನ್ನು ಅಥವಾ ವ್ಯಕ್ತಿಗಳ ಇತರ ಸಂಘವನ್ನು ಒಳಗೊಳ್ಳುತ್ತದೆ; ಮತ್ತು

(ಬಿ) ಫರ್ಮ್‌ನ ಸಂಬಂಧದಲ್ಲಿ **"ನಿರ್ದೇಶಕ"** ಎಂದರೆ, ಆ ಫರ್ಮಿನ ಒಬ್ಬ ಪಾಲುದಾರ.

## ಅಧ್ಯಾಯ – VII

## ಸಂಕೀರ್ಣ

**21. ಮಂಡಳಿಗೆ ಬಾಕಿ ಇರುವ ಮೊಬಲಗನ್ನು ಭೂಕಂದಾಯದ ಬಾಕಿಗಳಂತೆ ವಸೂಲಿ ಮಾಡುವುದು.**- ಯಾವೊಬ್ಬ ವ್ಯಕ್ತಿಯು, ಮಂಡಲಿಗೆ ಸಂದಾಯ ಮಾಡಬೇಕಾದ ಅಥವಾ ಈ ಅಧಿನಿಯಮದ ಅಡಿಯಲ್ಲಿ ಅಥವಾ ಮೂಲಕ ಅದು ವಸೂಲ್ಮಾಡಬೇಕಾದ ಎಲ್ಲಾ ಮೊತ್ತವನ್ನು ಹಾಗೂ ಈ ಸಂಬಂಧದಲ್ಲಿ ಸಂದಾಯ ಮಾಡಿದ ಎಲ್ಲಾ ಶುಲ್ಕಗಳನ್ನು ಅಥವಾ ವಹಿಸಿದ ವೆಚ್ಚಗಳನ್ನು ಯಾವುದೇ ಇತರ ವಸೂಲಿ ಕ್ರಮಕ್ಕೆ ಬಾಧಕವಾಗದಂತೆ, ಮಂಡಲಿಯ ಅರ್ಜಿಯ ಮೇಲೆ, ಭೂ ಕಂದಾಯದ ಬಾಕಿಯಂತೆ ವಸೂಲಿ ಮಾಡತಕ್ಕದ್ದು.

**22. ಅಧಿನಿಯಮವು ಅಧ್ಯಾರೋಹಿ ಪರಿಣಾಮವನ್ನು ಹೊಂದಿರುವುದು.**- ಈ ಅಧಿನಿಯಮದ ಉಪಬಂಧಗಳು, ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನಲ್ಲಿ ಅಥವಾ ಈ ಅಧಿನಿಯಮದ ಹೊರತಾಗಿ ಕಾನೂನಿನ ಬಲವನ್ನು ಹೊಂದಿರುವ ಯಾವುದೇ ಲಿಖಿತ ಪತ್ರದಲ್ಲಿ ಅಸಂಗತವಾದುದು ಏನೇ ಇದ್ದರೂ, ಪರಿಣಾಮಕಾರಿಯಾಗಿರತಕ್ಕದ್ದು.

**23. ಸದ್ಭಾವನೆಯಿಂದ ಕೈಗೊಂಡ ಕ್ರಮಕ್ಕೆ ರಕ್ಷಣೆ.**- ಈ ಅಧಿನಿಯಮದ ಅಡಿಯಲ್ಲಿ ಅಥವಾ ಅದರಡಿಯಲ್ಲಿ ರಚಿಸಿದ ಯಾವುದೇ ನಿಯಮದ ಅಡಿಯಲ್ಲಿ ಸದ್ಭಾವನೆಯಿಂದ ಕೈಗೊಂಡ ಅಥವಾ ಕೈಗೊಳ್ಳಲು ಉದ್ದೇಶಿಸಿದ ಯಾವುದೇ ಕೃತ್ಯಕ್ಕಾಗಿ, ವ್ಯವಸ್ಥಾಪನಾ ಮಂಡಳಿಯ ಅಥವಾ ರಾಜ್ಯಮಟ್ಟದ ಅಧಿಕಾರವುಳ್ಳ ಸಮಿತಿಯ ಅಧ್ಯಕ್ಷ ಅಥವಾ ಇತರ ಸದಸ್ಯರು ಒಳಗೊಂಡಂತೆ, ಯಾವೊಬ್ಬ ವ್ಯಕ್ತಿಯ ವಿರುದ್ಧ ಅಥವಾ ರಾಜ್ಯ ಸರ್ಕಾರದ ವಿರುದ್ಧ ಅಥವಾ ರಾಜ್ಯ ಸರ್ಕಾರದ ಯಾವೊಬ್ಬ ಅಧಿಕಾರಿ ಅಥವಾ ನೌಕರನ ವಿರುದ್ಧ ಯಾವುದೇ ದಾವೆ ಅಥವಾ ಇತರ ಕಾನೂನು ವ್ಯವಹರಣೆಯನ್ನು ಹೂಡತಕ್ಕದ್ದಲ್ಲ.

**24. ನಿಯಮಗಳ ರಚನಾಧಿಕಾರ.**-(1) ರಾಜ್ಯ ಸರ್ಕಾರವು, ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವುದಕ್ಕಾಗಿ ಅಧಿಸೂಚನೆಯ ಮೂಲಕ ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ಪ್ರತಿಯೊಂದು ನಿಯಮವನ್ನು, ಅದು ರಚಿಸಿದ ತರುವಾಯ ಆದಷ್ಟು ಬೇಗನೆ ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ, ಅದು ಒಂದು ಅಧಿವೇಶನದಲ್ಲಿ ಅಥವಾ ಒಂದಾದ ಮೇಲೊಂದು ಬರುವ ಎರಡು ಅಥವಾ ಹೆಚ್ಚು ನಿರಂತರ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ, ಅಧಿವೇಶನದಲ್ಲಿರುವಾಗ ಮಂಡಿಸತಕ್ಕದ್ದು ಮತ್ತು ಅದನ್ನು ಮಂಡಿಸಲಾದ ಅಧಿವೇಶನವು ಅಥವಾ ಅದರ ನಿಕಟ ತರುವಾಯದ ಅಧಿವೇಶನಗಳು ಮುಕ್ತಾಯವಾಗುವ ಮೊದಲು ಆ ನಿಯಮದಲ್ಲಿ ಯಾವುದೇ ಮಾರ್ಪಾಟನ್ನು ಮಾಡಲು ಎರಡೂ ಸದನಗಳು ಒಪ್ಪಿದರೆ ಅಥವಾ ಆ ನಿಯಮಗಳನ್ನು ಮಾಡಕೂಡದೆಂದು ಎರಡೂ ಸದನಗಳು ಒಪ್ಪಿದರೆ, ಆ ತರುವಾಯ ಆ ನಿಯಮವು ಸಂದರ್ಭಾನುಸಾರ, ಹಾಗೆ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ, ಆದರೆ, ಅಂಥ ಯಾವುದೇ ಮಾರ್ಪಾಟು ಅಥವಾ ರದ್ದಿಯಾತಿಯು, ಆ ನಿಯಮದ ಅಡಿಯಲ್ಲಿ ಹಿಂದೆ ಮಾಡಿದ ಯಾವುದೇ ಕಾರ್ಯದ ಸಿಂಧುತ್ವಕ್ಕೆ ಪ್ರತಿಕೂಲವಾಗಿರತಕ್ಕದ್ದಲ್ಲ.

**25. ವಿನಿಯಮಗಳ ರಚನಾಧಿಕಾರ.–** ಮಂಡಳಿಯು, ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಡನೆ ಈ ಅಧಿನಿಯಮಕ್ಕೆ ಮತ್ತು ಅದರ ಅಡಿಯಲ್ಲಿ ರಚಿಸಿದ ನಿಯಮಗಳಿಗೆ ಸುಸಂಗತವಾಗಿ ವಿನಿಯಮಗಳನ್ನು ರಚಿಸಬಹುದು, ಅಂಥ ವಿನಿಯಮಗಳು ಈ ಮುಂದಿನವುಗಳಿಗಾಗಿ ಉಪಬಂಧ ಕಲ್ಪಿಸತಕ್ಕದ್ದು:

(ಎ) ಅದರ ಕಾರ್ಯವಿಧಾನಗಳನ್ನು ನಿಯಂತ್ರಿಸುವುದು ಮತ್ತು ಅದರ ವ್ಯವಹಾರಗಳ ವಿಲೆ ಮಾಡುವುದು; ಮತ್ತು

(ಬಿ) ಅವಶ್ಯವೆಂದು ಭಾವಿಸಬಹುದಾದಂಥ ಇತರ ವಿಷಯಗಳು.

**26. ತೊಂದರೆಗಳನ್ನು ನಿವಾರಿಸುವ ಅಧಿಕಾರ.–** ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವಲ್ಲಿ ಯಾವುದೇ ತೊಂದರೆಯು ಉದ್ಭವಿಸಿದರೆ, ರಾಜ್ಯ ಸರ್ಕಾರವು ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಾಗದಂತೆ, ಆದೇಶಗಳ ಮೂಲಕ ತೊಂದರೆಗಳನ್ನು ನಿವಾರಿಸಬಹುದು:

ಪರಂತು ಈ ಅಧಿನಿಯಮವು ಪ್ರಾರಂಭದ ದಿನಾಂಕದಿಂದ ಎರಡು ವರ್ಷಗಳ ಅವಧಿಯು ಮುಕ್ತಾಯವಾದ ತರುವಾಯ, ಅಂಥ ಆದೇಶವನ್ನು ಹೊರಡಿಸುವಂತಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ.ಕೆ.ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಶನಿವಾರ, ಜುಲೈ ೩೧, ೨೦೧೦ (ಶ್ರಾವಣ ೯, ಶಕ ವರ್ಷ ೧೯೩೨) | ನಂ. ೮೯೮ |
|---|---|---|

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ಅಧಿಸೂಚನೆ**

**ನಂ. ಗ್ರಾಅಪ:70:ಜಿಪಸ:2010, ಬೆಂಗಳೂರು, ದಿನಾಂಕ: 29ನೇ ಜುಲೈ, 2010**

ಕರ್ನಾಟಕ ಪಂಚಾಯತ್ ರಾಜ್ (ಗ್ರಾಮ ಪಂಚಾಯತ್ ಆಯವ್ಯಯ ಮತ್ತು ಲೆಕ್ಕ ಪತ್ರ) ನಿಯಮಗಳು, 2010ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಗ್ರಾಮ ಪಂಚಾಯತಿಯ ಹಣಕಾಸಿನ ವ್ಯವಹಾರಗಳ ಅಧಿಕಾರವನ್ನು ಗ್ರಾಮ ಪಂಚಾಯತ್‌ನ ಅಧ್ಯಕ್ಷ ಮತ್ತು ಪಂಚಾಯತ್ ಅಭಿವೃದ್ಧಿ ಅಧಿಕಾರಿ ಜಂಟಿಯಾಗಿ ನಿರ್ವಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸ್ವರ್ಣಲತ. ಎಂ. ಭಂಡಾರೆ**
ಸರ್ಕಾರದ ಅಧೀನ ಕಾರ್ಯದರ್ಶಿ (ಪಂ.ರಾಜ್)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಶನಿವಾರ, ಜುಲೈ ೩೧, ೨೦೧೦ (ಶ್ರಾವಣ ೯, ಶಕ ವರ್ಷ ೧೯೩೨) | ನಂ. ೮೯೯ |
|---|---|---|

**PERSONNEL AND ADMINISTRATIVE REFORMS SECRETARIAT**

**NOTIFICATION**

**No. DPAR 96 SLU 2010, Bangalore, dated: 31st July, 2010**

In exercise of the powers conferred by sub-section (2) of section 15 read with clause (e) of sub-section (2) of section 23 of the Karnataka Lokayukta Act, 1984 (Karnataka Act 4 of 1985), the Government of Karnataka, in consultation with the Lokayukta, hereby makes the following rules further to amend the Karnataka Lokayukta (Cadre, Recruitment and Conditions of Service of the Officers and Employees) Rules, 1988, namely:-

**RULES**

**1. Title and commencement.-** (1) These rules may be called the Karnataka Lokayukta (Cadre, Recruitment and Conditions of Service of the Officers and Employees) (Amendment) Rules, 2010.

(2) They shall come into force from the date of their publication in the Official Gazette.

**2. Amendment of SCHEDULE.-** In the Karnataka Lokayukta (Cadre, Recruitment and Conditions of Service of the Officers and Employees) Rules, 1988,-

**(1) in the FIRST SCHEDULE,-**

**(i) Under the heading "ADMINISTRATION AND ENQUIRY WING",-** for the entries relating to the post of "Deputy Registrar", the following shall be substituted, namely:-

| | | | |
|---|---|---|---|
| Deputy Registrar (Enquiries) | – | 5 | - Scale less post |
| Deputy Registrar (Administration) | – | 1 | - Scale less post |
| Deputy Registrar (Administration) | – | 1 | - Rs. 20,025-28,275 |

**(ii)** **Under the heading "TECHNICAL WING",-**in the entries relating to the post of ''Assistant Statistical Officer" under the column `Number of posts` for the figure "1" the figure "2" shall be substituted

**(iii)** **Under the heading,- "POLICE WING", -**after the entries relating to the category of post of "Police Inspector", the following shall be inserted, namely:-

Sub-Inspector of Police-2 (Rs. 10,000-18,150).

Assistant Sub-Inspector of Police-2 (Rs. 7,275-13,350)

**(2)** **in the SECOND SCHEDULE**,-

**(i)** **Under the heading ``ADMINISTRATION AND ENQUIRY WING``,-**for the entries relating to the category of post of ``Deputy Registrar``, the following shall be substituted, namely:-

| Category of Post | Method of Recruitment | Minimum qualification |
|---|---|---|
| Deputy Registrar<br>(Enquiries) | By deputation of an officer in the scale of Senior Civil judge of the Karnataka Judicial Service or of an officer of the Karnataka Administrative Service (Group-A Senior Scale) | |
| Deputy Registrar<br>(Administration) | (1) One post by deputation of an officer in the scale of Senior Civil Judge of the Karnataka Judicial Service or of an officer of the Karnataka Administrative Service (Group-A Senior Scale).<br>(2) One post by promotion from the cadre of Asssitant Registrar (Administration). | **For Promotion:**<br>Must have put in a service of not less than three years in the cadre of Assistant Registrar (Administration).<br>Provided that if officials who have put in a service of not less than three years are not available, officials who have put in a service of not less than two years may be considered for promotion. |

**(ii)** **Under the heading "POLICE WING",-** after the entries relating to the category of post of "Police Inspector", the following shall be inserted, namely ;-

| | | |
|---|---|---|
| Sub-Inspector of Police | By promotion from the Cadre of ``Assistant Sub-Inspector of Police``. If no person is eligible for promotion then by deputation of a Sub-Inspector of Police from Police Department. | **For Promotion:-**<br>Must have put in a service of not less than eight years in the cadre of Assistant Sub-Inspector of Police. Provided that if officials who have put in not less than eight years of service are not available, then officials who have put in service of not less than five years may be considered for promotion. |
| Assistant Sub-Inspector of Police | By promotion from the ``Head Constable``. If no person is eligible for promotion then by deputation of a Assistant Sub-Inspector of Police from Police Department. | **For Promotion:-**<br>Must have put in a service of not less than eight years in the cadre of Head Constable. Provided that if officials who have put in not less than eight years of service are not available, then officials who have put in service of not less than five years may be considered for promotion. |

By Order and in the name of the Governor of Karnataka,

**P. MARKANDEYA**
Under Secretary to Government,
Department of Personnel and Administrative Reforms
(Service Rules-2)

# ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಸೋಮವಾರ, ಜುಲೈ ೨೬, ೨೦೧೦ (ಶ್ರಾವಣ ೪, ಶಕ ವರ್ಷ ೧೯೩೨) | ನಂ. ೮೬೭ |
|---|---|---|

**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**–:: ವಿಧಿ 28(4) ರ ಅಧಿಸೂಚನೆ ::–**

**ಸಂಖ್ಯೆ: ಸಿಐ 322 ಎಸ್‌ಪಿಕ್ಯೂ 2010, ಬೆಂಗಳೂರು, ದಿನಾಂಕ: 23ನೇ ಜುಲೈ, 2010**

1966 ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ (1966ರ ಕರ್ನಾಟಕ ಕಾಯ್ದೆ ಸಂಖ್ಯೆ:18) ವಿಧಿ 28(1) ರ ಪ್ರಕಾರ ದತ್ತವಾದ ಅಧಿಕಾರದ ಮೇರೆಗೆ ದಿನಾಂಕಃ 04–12–2009ರ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ–3 ವಿಶೇಷ ಪತ್ರಿಕೆ ಪುಟ ಸಂಖ್ಯೆ 1 ರಿಂದ 84 ರಲ್ಲಿ ಪ್ರಕಟವಾಗಿರುವ ಅಧಿಸೂಚನೆ ಸಂಖ್ಯೆ: ಸಿಐ 754 ಎಸ್.ಪಿ.ಕ್ಯೂ. 2007 ದಿನಾಂಕಃ 1–12–2009 ರ ಪ್ರಕಾರ ಸರ್ಕಾರವು ಸದರಿ ಅಧಿಸೂಚನೆಯಲ್ಲಿ ನಮೂದಿಸಲ್ಪಟ್ಟಿರುವ ಜಮೀನುಗಳನ್ನು ಸುವರ್ಣ ಕರ್ನಾಟಕ ಕಾರಿಡಾರ್ ಯೋಜನೆ ಉದ್ದೇಶಕ್ಕಾಗಿ ಭೂಸ್ವಾಧೀನಪಡಿಸಿಕೊಳ್ಳಲು ಇಚ್ಛೆಪಟ್ಟಿದೆ.

ಮೇಲ್ಕಂಡ ಅಧಿಸೂಚನೆಯ ಷೆಡ್ಯೂಲ್‌ನಲ್ಲಿ ನಮೂದಿಸಲ್ಪಟ್ಟಿರುವ ಜಮೀನುಗಳನ್ನು ಅಧಿಸೂಚನೆಯಲ್ಲಿ ಪ್ರಕಟಿಸಲಾಗಿರುವ ಉದ್ದೇಶಕ್ಕೆ ಸ್ವಾಧೀನಪಡಿಸಿಕೊಳ್ಳಬೇಕಾಗಿರುವುದು ಕರ್ನಾಟಕ ಸರ್ಕಾರಕ್ಕೆ ಮನದಟ್ಟಾಗಿದೆ. ಈ ಬಗ್ಗೆ ಮೇಲ್ಕಂಡ ಕಾಯ್ದೆ ವಿಧಿ 28(3)ರ ಪ್ರಕಾರ ಆದೇಶ ಹೊರಡಿಸಲಾಗಿದೆ.

ಆದುದರಿಂದ ಈ 1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ ವಿಧಿ 28(4) ರ (1966 ಕರ್ನಾಟಕ ಕಾಯ್ದೆ ನಂ: 18) ರ ಮೇರೆಗೆ ದತ್ತವಾದ ಅಧಿಕಾರದ ಮೇರೆಗೆ ಕರ್ನಾಟಕ ಸರ್ಕಾರ ಈ ಕೆಳಗೆ ನಮೂದಿಸಿರುವ ಜಮೀನುಗಳನ್ನು ಅಧಿಸೂಚನೆಯಲ್ಲಿ ತಿಳಿಸಲಾಗಿರುವ ಉದ್ದೇಶಕ್ಕಾಗಿ ಸ್ವಾಧೀನಪಡಿಸಿ ಕೊಳ್ಳಲಾಗಿದೆಯೆಂದು ಈ ಮೂಲಕ ಘೋಷಿಸಲಾಗಿದೆ.

| ಕ್ರ. ಸಂ | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ಸ್ವಾಧೀನಪಡಿಸಿಕೊಳ್ಳುತ್ತಿರುವ ವಿಸ್ತೀರ್ಣ | | | ಆಕಾರ (ರೂ) | ತರಹೆ | ಚೆ ಕ್ಕು ಬ ಂ ದಿ | | | |
|---|---|---|---|---|---|---|---|---|---|---|---|---|
| | | | | ಐನ್ ಎ–ಗು | ಖರಾಬು ಎ–ಗು | ಉಳಿಕೆ ಎ–ಗು | | | ಪೂರ್ವ ಸ.ನಂ | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| | (1) ಗ್ರಾಮ :: ವಸಂತನರಸಾಪುರ ಹೋಬಳಿ :: ಕೋರ ತಾಲ್ಲೂಕು :: ತುಮಕೂರು ಜಿಲ್ಲೆ :: ತುಮಕೂರು | | | | | | | | | | | |
| 1. | ಕೋಡೀರಯ್ಯ ಬಿನ್ ಚಿಕ್ಕಯ್ಯ<br>ಬೀರಯ್ಯ ಬಿನ್ ತೂರೇಗೌಡ<br>ಕೋಡೀರಯ್ಯ ಬಿನ್ ಬೀರಯ್ಯ<br>ವೀರಣ್ಣ ಬಿನ್ ಬೀರಯ್ಯ<br>ರಂಗಮ್ಮ ಕೋಂ ಈರಚಿಕ್ಕಣ್ಣ<br>ಪಿ.ವಿ.ಶ್ರೀನಿವಾಸಲು ಬಿನ್ ವೆಂಕಟರಮಣಪ್ಪ<br>ಟಿ.ಟಿ.ನಾರಾಯಣಪ್ಪ ಬಿನ್ ತಿಮ್ಮಯ್ಯ, ಮನಿರಾಜು ಬಿನ್ ಲೇಟ್ ಗಂಗಹುಚ್ಚಪ್ಪ | ಕೋಡೀರಯ್ಯ<br>ಬೀರಯ್ಯ<br>ಸೋಮಲಿಂಗಯ್ಯ<br>ಚಿಕ್ಕಣ್ಣ, ವೀರಣ್ಣ<br>ಸಣ್ಣಲಿಂಗಯ್ಯ<br>ಪಿ.ವಿ.ಶ್ರೀನಿವಾಸಲು<br>ಟಿ.ಟಿ.ನಾರಾಯಣಪ್ಪ<br>ಮನಿರಾಜು | 10/1ಪಿ | 9–16 | 1–20 | 7–36 | 7–00 | ಖುಷ್ಕಿ | 10 | ಉಳಿಕೆ | ಕೆಂಪನ ದೊಡ್ಡೇರಿ | 10/2 |

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
|---|---|---|---|---|---|---|---|---|---|---|---|---|
| 2. | ತಿಮ್ಮಯ್ಯ ಬಿನ್ ತಿಮ್ಮಯ್ಯ | ಗೋವಿಂದಯ್ಯ<br>ಮಹಲಿಂಗಯ್ಯ<br>ನಾರಾಯಣಪ್ಪ | 10/2 | 5–06 | 0–04 | 5–02 | 4–25 | ಖುಷ್ಕಿ | ಕೆಂಪನ ದೊಡ್ಡೇರಿ | ಉಳಿಕೆ | 10/1 | 10/3 |
| 3. | ಬೀರಣ್ಣ ಬಿನ್ ಕೋಡಿಲಿಂಗಯ್ಯ<br>ಶಿವಣ್ಣ ಬಿನ್ ಕೋಡಿಲಿಂಗಯ್ಯ<br>ರಾಜಣ್ಣ ಬಿನ್ ಕೋಡಿಲಿಂಗಯ್ಯ | ಬೀರಣ್ಣ<br>ಶಿವಣ್ಣ<br>ರಾಜಣ್ಣ | 10/3 | 1–35 | – | 1–35 | 1–31 | ಖುಷ್ಕಿ | ಕೆಂಪನ ದೊಡ್ಡೇರಿ | ಉಳಿಕೆ | 10/2 | 11, 12 |
| 4. | ಗಂಗಾಧರಯ್ಯ ಬಿನ್ ಚಿಕ್ಕಣ್ಣ | ಗಂಗಾಧರಯ್ಯ | 10/4 | 2–00 | – | 2–00 | – | ಖುಷ್ಕಿ | ಕೆಂಪನ ದೊಡ್ಡೇರಿ | ಉಳಿಕೆ | 10/2 | 11, 12 |
| 5. | ಗಂಗಣ್ಣ ಬಿನ್ ಕೋಡಿಲಿಂಗಯ್ಯ<br>ನರಸೀಯಪ್ಪ ಬಿನ್ ನರಸಿಂಹಯ್ಯ | ಗಂಗಣ್ಣ<br>ನರಸೀಯಪ್ಪ | 10/5 | 3–21 | 0–36 | 2–25 | 1–84 | ಖುಷ್ಕಿ | ಕೆಂಪನ ದೊಡ್ಡೇರಿ | ಉಳಿಕೆ | 10/2 | 11, 12 |
| 6 | ಇಂದುಶೇಖರ್ ಬಿನ್ ಬಿ.ಎನ್.ಭಗವಾನ್‌ಸಿಂಗ್<br>ರಾಜೇಶ್ವರಿ ಕೋಂ ಇಂದುಶೇಖರ್<br>ತುಳಸಮ್ಮಾ ಕೋಂ ಕಣ್ಣಪ್ಪ | ಇಂದುಶೇಖರ್ ಬಿನ್ ಬಿ.ಎನ್.ಭಗವಾನ್‌ಸಿಂಗ್<br>ರಾಜೇಶ್ವರಿ ಕೋಂ ಇಂದುಶೇಖರ್<br>ತುಳಸಮ್ಮಾ ಕೋಂ ಕಣ್ಣಪ್ಪ | 8/1 ಪೈಕಿ | 1–25 | 0–03 | 1–22 | 1–68 | ಖುಷ್ಕಿ | 22 | ಉಳಿಕೆ ಭೂಸ್ವಾಧೀನದ ಪ್ರದೇಶ | 9 | 8/2ಎ |
| 7. | ಸಾಯಿಬಾಬ ಬಿನ್ ಪ್ರಭಾತ್‌ಸಿಂಗ್ | ಸಾಯಿಬಾಬ ಬಿನ್ ಪ್ರಭಾತ್‌ಸಿಂಗ್ | 8/2ಬಿ | 3–19 | 0–10 | 3–09 | 3–20 | ಖುಷ್ಕಿ | 22 | ಉಳಿಕೆ ಭೂಸ್ವಾಧೀನದ ಪ್ರದೇಶ | 8/2ಎ | ಉಳಿಕೆ |
| 8. | ಸಾಯಿಬಾಬ ಬಿನ್ ಪ್ರಭಾತ್‌ಸಿಂಗ್ | ಸಾಯಿಬಾಬ ಬಿನ್ ಪ್ರಭಾತ್‌ಸಿಂಗ್ | 8/3 ಪೈಕಿ | 4–27 | 0–30 | 3–37 | 6–46 | ಖುಷ್ಕಿ | 16 | ತಿಮ್ಮರಾಜನ ಹಳ್ಳಿ ಗಡಿ | 8/2ಬಿ | ರಸ್ತೆ |
| 9. | ಸರ್ಕಾರಿ | ಸರ್ಕಾರಿ | 9ರ ಪೈಕಿ | 1–28 | 1–28 | – | – | – | ಭೂಸ್ವಾಧೀನ ಪ್ರದೇಶ | 11, 20,21 | 10 | 8 |
| 10. | ಕಮಲಮ್ಮ ಬಿನ್ ಕೃಷ್ಣಪ್ಪ ಕೆ.ಕೃಷ್ಣಪ್ಪ ಬಿನ್ ಕಾಳಯ್ಯ<br>ಸರ್ಕಾರಿ ಖರಾಬು | ಕಮಲಮ್ಮ ಬಿನ್ ಕೃಷ್ಣಪ್ಪ, ಕೆ.ಕೃಷ್ಣಪ್ಪ ಬಿನ್ ಕಾಳಯ್ಯ<br>ಸರ್ಕಾರಿ ಖರಾಬು | 11ರ ಪೈಕಿ | 8–26 | 8–26 | – | – | – | 12 | 9 | 10 | 21 |
| 11 | ಟಿ.ವಿ.ಕೃಷ್ಣಮೂರ್ತಿ ಬಿನ್ ವೆಂಕಟಪ್ಪ<br>ಕೆ.ಸೌಮ್ಯ ಬಿನ್ ಕೆ.ನಾಗಪ್ಪ | ಟಿ.ವಿ.ಕೃಷ್ಣಮೂರ್ತಿ ಬಿನ್ ವೆಂಕಟಪ್ಪ<br>ಕೆ.ಸೌಮ್ಯ ಬಿನ್ ಕೆ.ನಾಗಪ್ಪ | 20 | 4–00 | – | 4–00 | 5–00 | ಖುಷ್ಕಿ | 12 | 9 | 21 | 15, 22 ರಿಂದ 29 |

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
|---|---|---|---|---|---|---|---|---|---|---|---|---|
| 12 | ನರಸಮ್ಮ ಕೋಂ ತಿಮ್ಮಯ್ಯ<br>ಸಿ.ಬಿ.ರಂಗಯ್ಯ ಬಿನ್ ಚಿಕ್ಕಣ್ಣ | ನರಸಮ್ಮ ಕೋಂ ತಿಮ್ಮಯ್ಯ<br>ಸಿ.ಬಿ.ರಂಗಯ್ಯ ಬಿನ್ ಚಿಕ್ಕಣ್ಣ | 21 | 4–00 | 0–01 | 3–39 | 5–57 | ಖುಷ್ಕಿ | 12 | 9 | 11 | 20 |
| 13 | ಹನುಮಂತಯ್ಯ ಬಿನ್ ಹನುಮಯ್ಯ | ಹನುಮಂತಯ್ಯ ಬಿನ್ ಹನುಮಯ್ಯ | 22 | 2–22 | 0–02 | 2–20 | 3–05 | ಖುಷ್ಕಿ | 23 | 8 | 20 | ರಸ್ತೆ |
| 14 | ರತ್ನಮ್ಮ ಕೋಂ ಮುನಿರಂಗಯ್ಯ | ರತ್ನಮ್ಮ ಕೋಂ ಮುನಿರಂಗಯ್ಯ | 23 | 2–22 | 0–02 | 2–20 | 3–05 | ಖುಷ್ಕಿ | 24 | 22 | 20 | ರಸ್ತೆ |
| | | | **ಒಟ್ಟು** | **55-07** | **14-02** | **41-05** | | | | | | |
| **(2) ಗ್ರಾಮ :: ಕೆಂಪನದೊಡ್ಡೇರಿ ಹೋಬಳಿ :: ಕೋರ ತಾಲ್ಲೂಕು :: ತುಮಕೂರು ಜಿಲ್ಲೆ :: ತುಮಕೂರು** | | | | | | | | | | | | |
| 1. | ಚಿಕ್ಕಕದರಯ್ಯ ಬಿನ್ ಚಿಕ್ಕಣ್ಣ<br>ಶಿವಪ್ಪ ಬಿನ್ ಚಿಕ್ಕಣ್ಣ<br>ಚಿತ್ತಯ್ಯ ಬಿನ್ ಚಿಕ್ಕಣ್ಣ<br>ಸಿದ್ದಯ್ಯ ಬಿನ್ ಚಿಕ್ಕಣ್ಣ<br>ಈರಯ್ಯ ಬಿನ್ ಮಠದ ಕದರಯ್ಯ,<br>ಕರಡಯ್ಯ ಬಿನ್ ಕದರಯ್ಯ,<br>ನರಸಿಂಹಯ್ಯ ಬಿನ್ ಕದರಯ್ಯ | ಕದ್ರಯ್ಯ<br>ಚಿಕ್ಕಣ್ಣ<br>ಚಿಕ್ಕಕದರಯ್ಯ<br>ಶಿವಪ್ಪ<br>ಚಿತ್ತಯ್ಯ<br>ಸಿದ್ದಯ್ಯ<br>ಈರಯ್ಯ<br>ಕರಡಯ್ಯ<br>ನರಸಿಂಹಯ್ಯ | 82 | 7–26 | 0–16 | 7–10 | 5–80 | ಖುಷ್ಕಿ | 81 | ವಸಂತನರಸಾ ಪುರ ಗಡಿ | 83 | ಚಿಕ್ಕೋನ ಹಳ್ಳಿ ಗಡಿ |
| 2. | ಬಾಲ ಬಿನ್ ಸೀಬಯ್ಯ | ಬಾಲಯ್ಯ | 83 | 11–02 | 0–12 | 10–30 | 8–60 | ಖುಷ್ಕಿ | | | | |
| 3. | ಚಿಕ್ಕಣ್ಣ ಬಿನ್ ಕದ್ರಯ್ಯ<br>ಕೋಡೀರಯ್ಯ ಬಿನ್ ಬೀರಯ್ಯ<br>ವೀರಣ್ಣ ಬಿನ್ ಬೀರಣ್ಣ<br>ಪುಟ್ಟಮ್ಮ ಬಿನ್ ಬೀರಣ್ಣ | ಕದರಯ್ಯ<br>ಬಾಲಯ್ಯ<br>ಕೋಡೀರಯ್ಯ<br>ವೀರಣ್ಣ<br>ಪುಟ್ಟಮ್ಮ | 84 | 12–04 | 1–04 | 11–00 | 1–00 | ಖುಷ್ಕಿ | 83 | 85 | 87 | ವಸಂತ ನರಸಾ ಪುರ ಗಡಿ |
| 4. | ಬೀರೇಗೌಡ ಬಿನ್ ತೂರೇಗೌಡ<br>ಗಂಗಣ್ಣ ಬಿನ್ ಕೋಡಿ ಲಿಂಗಯ್ಯ,<br>ಸಿದ್ದಲಿಂಗಯ್ಯ, ಬಿನ್ ಕೋಡಿಲಿಂಗಪ್ಪ<br>ವೀರಬೈರಪ್ಪ ಬಿನ್ ಮುದ್ದೇಗೌಡ | ಬೀರೇಗೌಡ, ಗಂಗಣ್ಣ<br>ವೀರಬೈರಪ್ಪ,<br>ಸಿದ್ದಲಿಂಗಯ್ಯ<br>ಚಿಕ್ಕಲಿಂಗಯ್ಯ<br>ಕಾವಲ್ಲಮ್ಮ | 85ರ ಪೈಕಿ | 18–23 | 3–33 | 14–30 | 20–83 | ಖುಷ್ಕಿ | 84 | ಉಳಿಕೆ ಭೂಸ್ವಾಧೀನ | 86 | ವಸಂತ ನರಸಾ ಪುರ ಗಡಿ |

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
|---|---|---|---|---|---|---|---|---|---|---|---|---|
| | ಚಿಕ್ಕಲಿಂಗಯ್ಯ ಬಿನ್ ಚಿಕ್ಕಣ್ಣ<br>ಲಿಂಗಣ್ಣ ಬಿನ್ ಚಿಕ್ಕಣ್ಣ<br>ಕಾವಲ್ಲಮ್ಮ ಕೋಂ ಬೈರಪ್ಪ<br>ವೀರಭದ್ರಯ್ಯ ಬಿನ್ ಚಿಕ್ಕಣ್ಣ<br>ಎಸ್.ಆರ್.ಸುಮಿತ್ರ ಕೋಂ<br>ಕೆ.ಕರಿಯಣ್ಣ | ಲಿಂಗಣ್ಣ, ವೀರ<br>ಭದ್ರಯ್ಯ<br>ಎಸ್.ಆರ್.ಸುಮಿತ್ರ | | | | | | | | | | |
| 5. | ಮಹದೇವಯ್ಯ ಬಿನ್ ಹೆಚ್.ಈರಣ್ಣ | ಮಹದೇವಯ್ಯ | 86/3ಎ | 2–25 | 0–04 | 2–21 | 2–28 | ಖುಷ್ಕಿ | 86/4 | 86/1 | 90 | 86/3ಬಿ |
| 6. | ಕದರಯ್ಯ ರಂಗಪ್ಪ,<br>ಎನ್.ಮುದ್ದಯ್ಯ ಬಿನ್ ನರಸೇಗೌಡ | ಕದರಯ್ಯ ರಂಗಪ್ಪ,<br>ಎನ್.ಮುದ್ದಯ್ಯ | 86/3ಬಿ | 1–10 | 0–02 | 1–08 | 1–08 | ಖುಷ್ಕಿ | 86/4 | 86/5 | 86/3ಎ | 85 |
| 7. | ವೀರ ಬಿನ್ ಕರೇಕದ್ರ<br>ಕದರಮ್ಮ ಕೋಂ ಚಿನ್ನಯ್ಯ | ವೀರ, ಕದರಮ್ಮ | 86/4 | 3–31 | 0–12 | 3–19 | 3–09 | ಖುಷ್ಕಿ | 87 | 86/3ಬಿ | 86/3ಎ | 85 |
| 8. | ಫಡಾ | ಸೀಬಯ್ಯ | 90/1 | 2–11 | 0–03 | 2–08 | 1–98 | ಖುಷ್ಕಿ | 87, 89 | ನಾಗೇನಹಳ್ಳಿ ಗಡಿ | 89, 90 | 86 |
| 9. | ಮಹಮದ್ ಅನ್ವರ್ ಪಾಷ ಬಿನ್<br>ಲೇಟ್ ಬಾಷಸಾಬ್ | ಮಹಮದ್ ಅನ್ವರ್<br>ಪಾಷ | 90/2ಎ | 1–24 | 1–17 | 0–07 | 1–98 | ಖುಷ್ಕಿ | 87, 89 | ನಾಗೇನಹಳ್ಳಿ ಗಡಿ | 89, 90 | 86 |
| 10. | ಮಹಮದ್ ಅನ್ವರ್ ಪಾಷ ಬಿನ್<br>ಲೇಟ್ ಬಾಷಸಾಬ್ | ಮಹಮದ್ ಅನ್ವರ್<br>ಪಾಷ | 90/2ಬಿ | 1–13 | 0–07 | 1–06 | 1–98 | ಖುಷ್ಕಿ | 87, 89 | ನಾಗೇನಹಳ್ಳಿ ಗಡಿ | 89, 90 | 86 |
| 11. | ಕದ್ರಯ್ಯ ಬಿನ್ ಚಿಕ್ಕಣ್ಣ<br>ಈರಣ್ಣ ಬಿನ್ ಚಿಕ್ಕಣ್ಣ<br>ಗಂಗಮ್ಮ ಕೋಂ ಬಿ.ವಿ.ರುದ್ರಯ್ಯ<br>ಗಂಗಮ್ಮ ಬಿನ್ ಬಿ.ವಿ.ರುದ್ರಯ್ಯ | ಕದ್ರಯ್ಯ<br>ಗಂಗಮ್ಮ<br>ಈರಣ್ಣ<br>ಗಂಗಮ್ಮ | 87 | 11–13 | 1–03 | 10–10 | 7–18 | ಖುಷ್ಕಿ | 65 | 86, 99 | 88, 89 | 84 |
| 12. | ಕರೇವೀರಯ್ಯ ಬಿನ್ ವೀರಯ್ಯ<br>ಶಿವಪ್ಪ ಬಿನ್ ಚಿಕ್ಕಣ್ಣ, ಚಿಕ್ಕಕದರಯ್ಯ<br>ಬಿನ್ ಚಿಕ್ಕಣ್ಣ, ಚಿತ್ತಯ್ಯ ಬಿನ್<br>ಚಿಕ್ಕಣ್ಣ<br>ಸಣ್ಣಕದರಯ್ಯ ಬಿನ್ ಕರೇವೀರಯ್ಯ<br>ಈರಯ್ಯ ಬಿನ್ ಮಠದ ಕದರಯ್ಯ<br>ಈರಯ್ಯ ಬಿನ್ ಕದರಯ್ಯ<br>ಕರಡಯ್ಯ ಬಿನ್ ಕದರಯ್ಯ | ಕಪಿನಯ್ಯ, ದೊಡ್ಡ<br>ನರಸಯ್ಯ, ಚಿಕ್ಕಣ್ಣ<br>ವೀರಣ್ಣ, ದಾಸಯ್ಯ,<br>ಕುಂಬಯ್ಯ, ಚಿಕ್ಕ<br>ಕದರಯ್ಯ, ಶಿವಪ್ಪ<br>ಚಿತ್ತಯ್ಯ,ಸಣ್ಣಕದರಯ್ಯ<br>ಈರಯ್ಯ, ಕರಡಯ್ಯ | 88 | 10–35 | 0–22 | 10–13 | 14–37 | ಖುಷ್ಕಿ | 94, 95 | 89, 92 | 93, 94 | 87 |

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
|---|---|---|---|---|---|---|---|---|---|---|---|---|
| 13. | ಚಿಕ್ಕಮ್ಮ ಕೋಂ ಬೊಮ್ಮಣ್ಣ ಹೊಸಳಪ್ಪ ಬಿನ್ ಲೇಟ್ ವೀರಭದ್ರಯ್ಯ, ಪಿ.ಎಸ್.ಪದ್ಮಪ್ರಿಯ :ಉ: ಬಿ.ಪದ್ಮಪ್ರಿಯ ಬಿನ್ ಪಿ.ಕೆ.ಸೂರ್ಯ ನಾರಾಯಣಶೆಟ್ಟಿ | ಚಿಕ್ಕಮ್ಮ ಕೆ.ಎಸ್.ಲಕ್ಷ್ಮಿ ದೇವಮ್ಮ ಹೊಸಳಪ್ಪ ಪಿ.ಎಸ್.ಪದ್ಮಪ್ರಿಯ :ಉ: ಬಿ.ಪದ್ಮಪ್ರಿಯ ಬಿನ್ .ಕೆ.ಸೂರ್ಯ ನಾರಾಯಣಶೆಟ್ಟಿ | 89/1 | 4–16 | – | 4–16 | 4–40 | ಖುಷ್ಕಿ | 89/2 | 91 | 91, 92 | 80 |
| 14. | ಚಿಕ್ಕರಂಗಯ್ಯ ಬಿನ್ ನಂಜಯ್ಯ, ಶಿವಣ್ಣ ಬಿನ್ ವೀರ, ಸಿದ್ದಯ್ಯ ಬಿನ್ ವೀರ, | ಚಿಕ್ಕರಂಗಯ್ಯ ಶಿವಣ್ಣ ಸಿದ್ದಯ್ಯ | 89/2 | 9–09 | 0–04 | 9–05 | 9–13 | ಖುಷ್ಕಿ | 88 | 89/1 | 92 | 87, 90 |
| 15. | ರಂಗಯ್ಯ ಬಿನ್ ಪುಟ್ಟರಂಗಯ್ಯ ದೊಡ್ಡರಂಗಯ್ಯ ಬಿನ್ ರಂಗಯ್ಯ ಎನ್.ಪ್ರಸನ್ನ ಬಿನ್ ಆರ್.ನಾರಾಯಣಗೌಡ | ಪುಟ್ಟರಂಗಯ್ಯ ಪುಟ್ಟಸಿದ್ದಮ್ಮ ಹನುಮಂತಮ್ಮ ದೊಡ್ಡರಂಗಯ್ಯ ರಂಗಯ್ಯ ದೊಡ್ಡರಂಗಯ್ಯ ಎನ್.ಪ್ರಸನ್ನ | 90/3 | 3–38 | 0–03 | 3–35 | 3–49 | ಖುಷ್ಕಿ | 90/4 | 90/2 | 89 | 86 |
| 16. | ಕದುರಯ್ಯ ಬಿನ್ ಲೇಟ್ ದಾಸಪ್ಪ, ಶಿವಮ್ಮ ಕೋಂ ಲೇಟ್ ಈರಣ್ಣ, ಕರೇವೀರಯ್ಯ ಬಿನ್ ಲೇಟ್ ದಾಸಪ್ಪ, ಕದರಯ್ಯ ಬಿನ್ ಲೇಟ್ ದಾಸಪ್ಪ | ಕದುರಯ್ಯ ಶಿವಮ್ಮ ಕರೇವೀರಯ್ಯ ಕದರಯ್ಯ | 90/4 | 4–18 | 0–04 | 4–14 | 3–92 | ಖುಷ್ಕಿ | 87, 89 | 90/3 | 89 | 86 |
| 17. | ವೀರಯ್ಯ ಬಿನ್ ವೀರಯ್ಯ | ವೀರಯ್ಯ, ನಾರಾಯಣಪ್ಪ, ಗೋವಿಂದಪ್ಪ, | 91ಪಿ | 8–00 | – | 8–00 | 6–00 | ಖುಷ್ಕಿ | 93 | ಉಳಿಕೆ | 90 | 89 |
| 18. | ರಂಗಯ್ಯ ಬಿನ್ ಮರಿಕದರಯ್ಯ ಕದರಯ್ಯ ಬಿನ್ ಮರಿಕದರಯ್ಯ ಈರಣ್ಣ ಬಿನ್ ಚಿತ್ತಯ್ಯ | ಈರಚಿಕ್ಕಣ್ಣ ರಂಗಯ್ಯ ಕದರಯ್ಯ ಈರಣ್ಣ | 92/1 | 7–29 | 0–03 | 7–26 | 8–42 | ಖುಷ್ಕಿ | 92/2 | 91 | 93 | 89 |
| 19. | ಶಿವಣ್ಣ ಬಿನ್ ವೀರ ಸಿದ್ದಯ್ಯ ಬಿನ್ ವೀರ | ಶಿವಣ್ಣ, ಸಿದ್ದಯ್ಯ | 92/2 | 3–15 | 0–01 | 3–14 | 3–69 | ಖುಷ್ಕಿ | 88 | 92/1 | 93 | 89 |
| | | | **ಒಟ್ಟು** | **125-22** | **9-30** | **115-32** | | | | | | |

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
|---|---|---|---|---|---|---|---|---|---|---|---|---|
| (3) ಗ್ರಾಮ :: ಬತ್ಸಂದ್ರ ಹೋಬಳಿ :: ಕೋರ ತಾಲ್ಲೂಕು :: ತುಮಕೂರು ಜಿಲ್ಲೆ :: ತುಮಕೂರು | | | | | | | | | | | | |
| 1. | ಬಿ.ಆರ್.ನರಸಿಂಹಮೂರ್ತಿ ಬಿನ್ ರಾಮಭದ್ರಯ್ಯ, ನಾಗರಾಜು ಬಿನ್ ರಾಮಭದ್ರಯ್ಯ ನರಸೇಗೌಡ ಬಿನ್ ರುದ್ರಯ್ಯ, ಆರ್.ನಟರಾಜ ಬಿನ್ ರಾಮಯ್ಯ | ಬಿ.ಆರ್.ನರಸಿಂಹ ಮೂರ್ತಿ ನಾಗರಾಜು ಆರ್.ನಟರಾಜ | 11 | 9–14 | 0–15 | 8–39 | 7–18 | ಖುಷ್ಕಿ | 98 | 26, 28 | 38 | 12 |
| 2. | ಕರಿಯಪ್ಪ ಬಿನ್ ಪುಟ್ಟಯ್ಯ | ಕರಿಯಪ್ಪ | 12/1ಎ | 1–25 | 0–04 | 1–21 | 1–22 | ಖುಷ್ಕಿ | 10 | 12/2 | 11 | 13 |
| 3. | ಲಕ್ಷ್ಮೀದೇವಮ್ಮ ಕೋಂ ಬಸವರಾಜು | ಲಕ್ಷ್ಮೀದೇವಮ್ಮ | 12/1ಬಿ | 1–24 | 0–03 | 1–21 | 1–22 | ಖುಷ್ಕಿ | 10 | 12/2 | 11 | 13 |
| 4. | ಬಿ.ಭಾನುಪ್ರಸಾದ್ ಬಿನ್ ವಿ.ಬಾಲಚಂದ್ರ | ಬಿ.ಭಾನುಪ್ರಸಾದ್ | 12/2 | 4–24 | 0–16 | 4–08 | 3–36 | ಖುಷ್ಕಿ | 12/1 | 26 | 11 | 13 |
| 5. | ಸರ್ಕಾರಿ ಖರಾಬು (ಗೋಮಾಳ) | ಸರ್ಕಾರಿ ಖರಾಬು (ಗೋಮಾಳ) | 13ರ ಪೈಕಿ | 5–20 | 5–20 | – | – | – | ಉಳಿಕೆ | 25 | 12 | 92, 93 |
| 6. | ರುದ್ರಮೂರ್ತಿ ಬಿನ್ ಲೇ. ವೀರಣ್ಣ, ರೇಣುಕಾರಾಧ್ಯ ಬಿನ್ ಲೇ. ವೀರಣ್ಣ, ರಾಜಶೇಖರಯ್ಯ ಬಿನ್ ಲೇ. ವೀರಣ್ಣ, ಜಿ.ರೇಣುಕಾ ಬಿನ್ ಲೇ. ಗಂಗಪ್ಪ, ಜಿ.ನಿರ್ಮಲ ಬಿನ್ ಲೇ.ಗಂಗಪ್ಪ, ಜಿ.ಸುಮಿತ್ರ ಬಿನ್ ಲೇ.ಗಂಗಪ್ಪ, ಜಿ.ಪ್ರೇಮಕುಮಾರಿ ಬಿನ್ ಲೇ.ಗಂಗಪ್ಪ, ಜಿ.ರಾಜೇಶ್ವರಿ ಬಿನ್ ಲೇ.ಗಂಗಪ್ಪ, ಉಮೇಶ್ ಬಿನ್ ಲೇ.ವೀರಭದ್ರಯ್ಯ | ರುದ್ರಮೂರ್ತಿ ರೇಣುಕಾರಾಧ್ಯ ರಾಜಶೇಖರಯ್ಯ ಜಿ.ರೇಣುಕಾ ಜಿ.ನಿರ್ಮಲ ಜಿ.ಸುಮಿತ್ರ ಜಿ.ಪ್ರೇಮಕುಮಾರಿ ಜಿ.ರಾಜೇಶ್ವರಿ ಉಮೇಶ್ ಪುಟ್ಟರುದ್ರಮ್ಮ | 15ರ ಪೈಕಿ | 0–20 | – | 0–20 | | ಖುಷ್ಕಿ | ಉಳಿಕೆ | 16 | 92 | 17 |
| 7. | ಸರ್ಕಾರಿ (ಗೋಮಾಳ ನೆಡುತೋಪು) | ಸರ್ಕಾರಿ | 16 | 10–17 | – | 10–17 | | ಖುಷ್ಕಿ | 92, 15 | 23 | 25 | 17, 21 |
| 8. | ಕಾಮಯ್ಯ ಬಿನ್ ಚಿಕ್ಕಹನುಮಯ್ಯ | ಕಾಮಯ್ಯ | 17/1ಎ | 3–37 | 0–05 | 3–32 | 4–68 | ಖುಷ್ಕಿ | 17/2 | 12 | 17/ಬಿ | 18 |
| 9. | ಚಿಕ್ಕಹನುಮಯ್ಯ ಬಿನ್ ಧರ್ಮಯ್ಯ | ಚಿಕ್ಕಹನುಮಯ್ಯ | 17/1ಬಿ | 4–00 | 0–03 | 3–37 | 4–60 | ಖುಷ್ಕಿ | 17/2 | 21 | 16 | 18 |

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
|---|---|---|---|---|---|---|---|---|---|---|---|---|
| 10 | ರಂಗಶ್ಯಾಮಯ್ಯ ಬಿನ್ ಆಳ್ಳಿತಿಮ್ಮಯ್ಯ | ರಂಗಶ್ಯಾಮಯ್ಯ | 17/2 | 0–38 | – | 0–38 | 1–14 | ಖುಷ್ಕಿ | 19 | 17/1ಬಿ,ಎ | 16 | 18 |
| 11 | ತಿಮ್ಮಕ್ಕ ಕೋಂ ಸಣ್ಣಲಿಂಗಯ್ಯ | ತಿಮ್ಮಕ್ಕ | 18/1 | 1–22 | 0–02 | 1–20 | 1–95 | ಖುಷ್ಕಿ | 19 | 21 | 17 | 21 |
| 12 | ರಂಗಧಾಮಯ್ಯ ಬಿನ್ ಪುಟ್ಟರಂಗಯ್ಯ, ಚಿಕ್ಕರಂಗಯ್ಯ ಬಿನ್ ಪುಟ್ಟರಂಗಯ್ಯ, ಎಲ್ಲಮ್ಮ ಕೋಂ ಭೀಮಯ್ಯ, ಚಿಕ್ಕರಂಗಯ್ಯ ಬಿನ್ ಪುಟ್ಟರಂಗಯ್ಯ, ಲಕ್ಷ್ಮೀದೇವಮ್ಮ ಕೋಂ ವೆಂಕಟಪ್ಪ | ರಂಗಧಾಮಯ್ಯ ಚಿಕ್ಕರಂಗಯ್ಯ ಎಲ್ಲಮ್ಮ ಲಕ್ಷ್ಮೀದೇವಮ್ಮ | 18/2 | 2–00 | – | 2–00 | 2–60 | ಖುಷ್ಕಿ | 19 | 21 | 17 | 21 |
| 13 | ಶಿವಣ್ಣ ಬಿನ್ ಲಿಂಗನಾಯಕ ನಂಜಯ್ಯ ಬಿನ್ ಲಿಂಗನಾಯಕ, ಕಾಮಯ್ಯ ಬಿನ್ ಲಿಂಗನಾಯಕ ಪುಟ್ಟಲಿಂಗಯ್ಯ ಬಿನ್ ಲಿಂಗನಾಯಕ | ಶಿವಣ್ಣ ನಚಿಜಯ್ಯ ಕಾಮಯ್ಯ ಪುಟ್ಟಲಿಂಗಯ್ಯ | 20 | 5–11 | 0–05 | 5–06 | 5–88 | ಖುಷ್ಕಿ | ಉಳಿಕೆ ಓಣಿ | 22 | 21 | ಕೆಂಪನ ದೊಡ್ಡೇರಿ ಗಡಿ |
| 14 | ರಂಗಧಾಮಯ್ಯ ಬಿನ್ ಪುಟ್ಟರಂಗಯ್ಯ, ಚಿಕ್ಕರಂಗಯ್ಯ ಬಿನ್ ಪುಟ್ಟರಂಗಯ್ಯ, ಎಲ್ಲಮ್ಮ ಕೋಂ ಭೀಮಯ್ಯ, ತಿಮ್ಮಯ್ಯ ಬಿನ್ ಪುಟ್ಟರಂಗಯ್ಯ, ಲಕ್ಷ್ಮೀದೇವಮ್ಮ ಕೋಂ ವೆಂಕಟಪ್ಪ | ರಂಗಧಾಮಯ್ಯ ಚಿಕ್ಕರಂಗಯ್ಯ ಎಲ್ಲಮ್ಮ ಲಕ್ಷ್ಮೀದೇವಮ್ಮ ತಿಮ್ಮಯ್ಯ | 21 | 7–19 | 2–09 | 5–10 | 3–15 | ಖುಷ್ಕಿ | 17, 18 | 22 | 16 | 20 |
| 15 | ಲಕ್ಷ್ಮಕ್ಕ ಕೋಂ ಮಾದಯ್ಯ | ಲಕ್ಷ್ಮಮ್ಮ | 22/1ಬಿ | 2–28 | 0–10 | 2–18 | 1–96 | ಖುಷ್ಕಿ | 21 | ನಾಗೇನಹಳ್ಳಿ ಗಡಿ | 23 | 22/10 |
| 16 | ವೈ.ಬಿ.ಸಿದ್ದಲಿಂಗಯ್ಯ, ಶಶಿಧರ ಬಿನ್ ಹುಚ್ಚಪ್ಪ, ನಚಿಜುಂಡಪ್ಪ ಬಿನ್ ಶೀಬಿಲಿಂಗೇಗೌಡ | ವೈ.ಬಿ.ಸಿದ್ದಲಿಂಗಯ್ಯ, ಶಶಿಧರ ನಂಜುಂಡಪ್ಪ | 22/2 | 12–15 | 1–10 | 11–05 | 9–99 | ಖುಷ್ಕಿ | 21 | ನಾಗೇನಹಳ್ಳಿ ಗಡಿ | 22/10 | ಕೆಂಪನ ದೊಡ್ಡೇರಿ ಗಡಿ |
| 17 | ಚಿಕ್ಕಹನುಮಯ್ಯ ಬಿನ್ ಕಾಮಯ್ಯ,ಹನುಮಂತರಾಯಪ್ಪ ಬಿನ್ ಕರೇಹನುಮಯ್ಯ ಚಿಕ್ಕಹನುಮಯ್ಯ ಬಿನ್ ಕರೇಹನುಮಯ್ಯ ಕಾಮಯ್ಯ ಬಿನ್ ಕರೇಹನುಮಯ್ಯ ಚಿಕ್ಕಣ್ಣ ಬಿನ್ ಕರೇಹನುಮಯ್ಯ | ಚಿಕ್ಕಣ್ಣ, ದೊಡ್ಡಯ್ಯ, ಹನುಮಂತರಾಯಪ್ಪ ಚಿಕ್ಕಹನುಮಯ್ಯ ಕಾಮಯ್ಯ ಚಿಕ್ಕಣ್ಣ | 23 | 13–32 | 0–02 | 13–30 | 10–20 | ಖುಷ್ಕಿ | 16 | ನಾಗೇನಹಳ್ಳಿ ಗಡಿ | 24 | 22 |

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
|---|---|---|---|---|---|---|---|---|---|---|---|---|
| 18 | ಹೆಚ್.ಆರ್. ನರಸಿಂಹ ಗುಪ್ತ ಬಿನ್ ರಾಮಯ್ಯ ಶೆಟ್ಟಿ, | ಹೆಚ್.ಆರ್. ನರಸಿಂಹ ಗುಪ್ತ, | 24 | 6–10 | 1–00 | 5–10 | 7–35 | ಖುಷ್ಕಿ | 25 | ನಾಗೇನಹಳ್ಳಿ ಗಡಿ | 26 | 23 |
| 19 | ಗೋಮಾಳ | ನೆಡುತೋಪು | 25 | 10–35 | – | 10–35 | | ಖುಷ್ಕಿ | 13 | 24 | 26 | 16 |
| 20 | ರಂಗಯ್ಯ ಬಿನ್ ಚಿಕ್ಕರಂಗಯ್ಯ ನರಸಿಂಹಯ್ಯ ಬಿನ್ ಚಿಕ್ಕರಂಗಯ್ಯ | ರಂಗಯ್ಯ, ನರಸಿಂಹಯ್ಯ | 26/1ಎ | 2–34 | 0–02 | 2–32 | 2–24 | ಖುಷ್ಕಿ | 11, 12 | 26/1ಬಿ | 27, 28 | 26/2 |
| 21 | ನಂಜೇಗೌಡ ಬಿನ್ ಚಿಕ್ಕರಾಮೇಗೌಡ | ನಂಜೇಗೌಡ | 26/1ಬಿ | 1–14 | – | 1–14 | 1–08 | ಖುಷ್ಕಿ | 26/10 | ನಾಗೇನಹಳ್ಳಿ ಗಡಿ | 27 | 26/2 |
| 22 | ಹೆಚ್.ಎಸ್.ಸೀತಾ ರಾಮಯ್ಯ | ಹೆಚ್.ಎಸ್.ಸೀತಾ ರಾಮಯ್ಯ | 26/2 | 4–25 | 0–08 | 4–17 | 3–54 | ಖುಷ್ಕಿ | 12 | ನಾಗೇನಹಳ್ಳಿ ಗಡಿ | 26/1ಎ, 1ಬಿ | 26/303ಬಿ |
| 23 | ದೇವರಾಜು ಬಿನ್ ಶಿವಯ್ಯ | ದೇವರಾಜು | 26/3ಎ | 6–18 | 0–11 | 6–07 | 4–94 | ಖುಷ್ಕಿ | 12 | ನಾಗೇನಹಳ್ಳಿ ಗಡಿ | 26/2 | 24, 25 |
| 24 | ಬಸಮ್ಮ ಬಿನ್ ಕೆಂಪೀರೇಗೌಡ | ಬಸಮ್ಮ | 26/3ಬಿ | 3–15 | – | 3–15 | 2–70 | ಖುಷ್ಕಿ | 26/30 | ನಾಗೇನಹಳ್ಳಿ ಗಡಿ | 26/2 | 24 |
| 25 | ವೀರನಾಗಯ್ಯ, ಈರಪ್ಪ, ಸಿದ್ದಗಂಗಯ್ಯ, ದೊಡ್ಡಕ್ಕ ಕೋಂ ನಾಗರಾಜು | ವೀರನಾಗಯ್ಯ, ಈರಪ್ಪ, ಸಿದ್ದಗಂಗಯ್ಯ, ದೊಡ್ಡಕ್ಕ | 27 | 9–03 | 0–09 | 8–34 | 7–07 | ಖುಷ್ಕಿ | 28 | ನಾಗೇನಹಳ್ಳಿ ಗಡಿ | 30 | 26 |
| 26 | ಚಿಕ್ಕಣ್ಣ ಬಿನ್ ಹನುಮಯ್ಯ | ದಾಸಪ್ಪ | 28/1ಎ | 2–16 | 0–05 | 2–11 | 1–37 | ಖುಷ್ಕಿ | 38 | 30 | 28/1ಬಿ | 28/2 |
| 27 | ರವೀಂದ್ರನಾಥ ಬಿನ್ ರಾಮಯ್ಯ, ಶ್ಯಾಮಸುಂದರ ಬಿನ್ ರಾಮಯ್ಯ | ರವೀಂದ್ರನಾಥ, ಶ್ಯಾಮಸುಂದರ | 28/1ಬಿ | 2–23 | 0–10 | 2–13 | 1–40 | ಖುಷ್ಕಿ | 29 | 30 | 29 | 28/10 |
| 28 | ಚನ್ನ ಬಿನ್ ಚನ್ನದಾಸಿ | ಚಿಕ್ಕಹನುಮಯ್ಯ | 28/2 | 1–19 | 0–04 | 1–15 | 0–83 | ಖುಷ್ಕಿ | 38 | 27 | 28/1ಎ | 28/3 |
| 29 | ಚನ್ನ ಬಿನ್ ಚನ್ನದಾಸಿ | ಕೆಂಪಯ್ಯ, ಚನ್ನಯ್ಯ, ಚಿಕ್ಕಹನುಮಯ್ಯ | 28/3 | 3–10 | 0–17 | 2–33 | 1–70 | ಖುಷ್ಕಿ | 38, 11 | 27 | 28/2 | 28/4 |
| 30 | ಹನುಮಂತರಾಯ ಬಿನ್ ಕಾಮಯ್ಯ | ಚಿಕ್ಕಹನುಮಯ್ಯ | 28/4 | 1–34 | – | 1–34 | 1–02 | ಖುಷ್ಕಿ | 11 | 27 | 28/3 | 26 |
| 31 | ಆರ್. ಶಶಿಕಲಾವತಿ ಬಿನ್ ರಾಮಯ್ಯ | ಆರ್.ಶಶಿಕಲಾವತಿ | 29/1 | 1–19 | 0–10 | 1–09 | 0–86 | ಖುಷ್ಕಿ | 29/2 | 30 | 31 | 28 |
| 32 | ರಂಗಯ್ಯ ಬಿನ್ ನರಸಿಂಹಯ್ಯ, ಶಾರದಮ್ಮ ಕೋಂ ದಾಸಪ್ಪ, ಚಿಕ್ಕಣ್ಣ ಬಿನ್ ಕರೇಹನುಮಯ್ಯ | ರಂಗಯ್ಯ, ಶಾರದಮ್ಮ, ಚಿಕ್ಕಣ್ಣ | 29/2 | 2–19 | 0–19 | 2–00 | 1–40 | ಖುಷ್ಕಿ | 29/4 | 29/1 | 37 | 28 |
| 33 | ಚಿಕ್ಕಣ್ಣ ಬಿನ್ ಹನುಮಯ್ಯ, ಚಿಕ್ಕಹನುಮಯ್ಯ ಬಿನ್ ಹನುಮಯ್ಯ | ಚಿಕ್ಕಣ್ಣ, ಚಿಕ್ಕಹನುಮಯ್ಯ | 30/1 | 4–34 | 0–19 | 4–15 | 3–07 | ಖುಷ್ಕಿ | 28, 29 | ಯಲ್ಲದಡ್ಲು ಗಡಿ | 31 | 27 |

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
|---|---|---|---|---|---|---|---|---|---|---|---|---|
| 34 | ರಾಜಣ್ಣ ಬಿನ್ ನಂಜುಂಡಪ್ಪ | ರಾಜಣ್ಣ | 30/2 | 4–24 | 0–19 | 4–05 | 2–89 | ಖುಷ್ಕಿ | 28, 29 | ಯಲ್ಲದಡ್ಲು ಗಡಿ | 31 | 27 |
| 35 | ಕೆ.ಟಿ.ರಾಜಕುಮಾರ್ ಬಿನ್ ತಿರುಮಲಯ್ಯ | ಕೆ.ಟಿ. ರಾಜಕುಮಾರ್ | 31/1 | 2–37 | – | 2–37 | 2–93 | ಖುಷ್ಕಿ | 32 | ಯಲ್ಲದಡ್ಲು ಗಡಿ | 33 | 31/201 |
| 36 | ಸಿದ್ದಪ್ಪ ಬಿನ್ ಆಡವಪ್ಪ | ನರಸಯ್ಯ, ಚಿಕ್ಕೆಕೆಂಪಯ್ಯ, ಚಿಕ್ಕಕದರಯ್ಯ, ರಂಗಯ್ಯ, ಕದರಯ್ಯ | 31/2ಎ | 14–22 | 0–14 | 14–08 | 14–20 | ಖುಷ್ಕಿ | 26 | ಯಲ್ಲದಡ್ಲು ಗಡಿ | 97, 31/1 | 31/2ಬಿ |
| 37 | ತಿಮ್ಮಕ್ಕ ಕೋಂ ರಂಗಯ್ಯ ಚಿಕ್ಕರಂಗಯ್ಯ | ರಂಗಯ್ಯ, ತಿಮ್ಮಕ್ಕ, ಚಿಕ್ಕರಂಗಯ್ಯ | 31/2ಬಿ | 2–32 | – | 2–32 | 2–30 | ಖುಷ್ಕಿ | 36 | 30 | 31/20 | 29, 30 |
| 38 | ಕದ್ರಯ್ಯ ಬಿನ್ ಶೀಬಯ್ಯ, ಈರಬಿಳಿಯಪ್ಪ ಬಿನ್ ವೀರಣ್ಣ | ಕದ್ರಯ್ಯ, ಈರಬಿಳಿಯಪ್ಪ | 32 | 3–18 | – | 3–18 | 3–28 | ಖುಷ್ಕಿ | 34 | 31 | 33 | 97 |
| 39 | ಖರಾಬು, ಚಿಕ್ಕೆಂಪಯ್ಯ., ಕೆ.ನಂಜಪ್ಪ ಬಿನ್ ಕೆಂಪಕದರಯ್ಯ, ಜಯ ರಾಮಯ್ಯ ಬಿನ್ ಕೆ.ನಂಜಪ್ಪ, ಲಕ್ಷ್ಮೀಕಾಂತ ಬಿನ್ ಕೆ.ನಂಜಪ್ಪ, ಕೃಷ್ಣಮೂರ್ತಿ ಬಿನ್ ಕೆ. ನಂಜಪ್ಪ | ಕೆ.ನಂಜಪ್ಪ, ಜಯರಾಮಯ್ಯ, ಲಕ್ಷ್ಮೀಕಾಂತ ಕೃಷ್ಣಮೂರ್ತಿ, ಸಿದ್ದಲಿಂಗಮ್ಮ | 33 | 6–34 | – | 6–34 | 1–00 | ಖುಷ್ಕಿ | 34 | ಯಲ್ಲದಡ್ಲು ಗಡಿ | ಕೆಂಚನಹಳ್ಳಿ ಗಡಿ | 31, 32 |
| 40 | ಸಿದ್ದಯ ಬಿನ್ ತಿಮ್ಮಯ್ಯ, ಲಕ್ಷ್ಮೀದೇವಮ್ಮ ಕೋಂ ವೆಂಕಟರಮಣಯ್ಯ, ಲೀಲಮ್ಮ ಕೋಂ ಮಾರ್ಕಂಡಯ್ಯ, ಸಿದ್ದಯ್ಯ ಬಿನ್ ತಿಮ್ಮಯ್ಯ, ಗೋವಿಂದಯ್ಯ ಬಿನ್ ತಿಮ್ಮಯ್ಯ, ಸಿದ್ದರಾಜಯ್ಯ ಬಿನ್ ಮುನಿಯಪ್ಪ | | 34 | 14–16 | 1–09 | 13–07 | 9–23 | ಖುಷ್ಕಿ | 46 | 32, 33 | ಕೆಂಚನಹಳ್ಳಿ ಗಡಿ | 35 |
| 41 | ಲಕ್ಷ್ಮೀದೇವಮ್ಮ ಕೋಂ ಬಸವರಾಜು | ಲಕ್ಷ್ಮೀದೇವಮ್ಮ | 35/1 | 0–39 | – | 0–39 | 0–58 | ಖುಷ್ಕಿ | 45 | 34 | 34 | 36 |
| 42 | ಗುರುಸಿದ್ದಯ್ಯ ಬಿನ್ ನಂಜಪ್ಪ | ಗುರುಸಿದ್ದಯ್ಯ | 35/2 | 0–37 | – | 0–37 | 0–84 | ಖುಷ್ಕಿ | 45 | 34 | 34 | 36 |
| 43 | ಲಕ್ಷ್ಮೀದೇವಮ್ಮ ಕೋಂ ಬಸವರಾಜು | ಲಕ್ಷ್ಮೀದೇವಮ್ಮ | 35/3 | 2–38 | 0–05 | 2–33 | 2–55 | ಖುಷ್ಕಿ | 45 | 34 | 34 | 36 |
| 44 | ಗುರುಸಿದ್ದಯ್ಯ ಬಿನ್ ನಂಜಪ್ಪ | ಗುರುಸಿದ್ದಯ್ಯ | 35/4 | 3–07 | 0–01 | 3–06 | 2–84 | ಖುಷ್ಕಿ | 45 | 34 | 34 | 36 |

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
|---|---|---|---|---|---|---|---|---|---|---|---|---|
| 45 | ಕೆ.ಆರ್.ರಂಗಯ್ಯ ಬಿನ್ ರಂಗಪ್ಪ, ದಾಸಪ್ಪ ಬಿನ್ ರಂಗಪ್ಪ, ನರಸಿಂಹ ಮೂರ್ತಿ ಬಿನ್ ನರಸಪ್ಪ, ಉಗ್ರಯ್ಯ ಬಿನ್ ನರಸಿಂಹಯ್ಯ, ನರಸಿಂಹ ಮೂರ್ತಿ ಬಿನ್ ನರಸಿಂಹಯ್ಯ, ಕೆಂಪಮ್ಮ ಕೋಂ ಲೇಟ್ ಪವಾಡ ದಾಸಯ್ಯ, ಶಶಿಕಲಾ ಕೋಂ ಗೋಪಿನಾಥ, ಲೀಲಾವತಿ ಬಿನ್ ಲೇಟ್ ಪವಾಡೆದಾಸಯ್ಯ, ವೇದಾವತಿ ಬಿನ್ ಲೇಟ್ ಪವಾಡದಾಸಯ್ಯ | ಕೆ.ಆರ್. ರಂಗಯ್ಯ.. ದಾಸಪ್ಪ, ಪವಾಡದಾಸ, ನರಸಿಂಹಮೂರ್ತಿ, ಉಗ್ರಯ್ಯ, ನರಸಿಂಹಮೂರ್ತಿ, ಕೆಂಪಮ್ಮ, ಶಶಿಕಲಾ, ಲೀಲಾವತಿ, ವೇದಾವತಿ | 36 | 18–18 | 0–21 | 17–37 | 14–34 | ಖುಷ್ಕಿ | 45 | 31 | 35 | 37 |
| 46 | ಅಫಿಯಾಬಿ | ಅಫಿಯಾಬಿ | 37/1 | 3–30 | 0–06 | 3–24 | 2–88 | ಖುಷ್ಕಿ | 40 | 29 | 36 | 37 |
| 47 | ಶ್ರೀದೇವಮ್ಮ ಬಿನ್ ಶಿವನಂಜಯ್ಯ, ಪುಟ್ಟ ಗಂಗಮ್ಮ ಕೋಂ ಶಿವಣ್ಣ | ಶ್ರೀದೇವಮ್ಮ ಪುಟ್ಟಗಂಗಮ್ಮ | 37/2 | 4–30 | 0–05 | 4–25 | 3–70 | ಖುಷ್ಕಿ | 40 | 37/3 | 37/1 | 38 |
| 48 | ಚಿಕ್ಕಣ್ಣ ಬಿನ್ ರಂಗಯ್ಯ ರಂಗಶ್ಯಾಮಯ್ಯ ಬಿನ್ ನಂಜಪ್ಪ, ಮಹಲಿಂಗಯ್ಯ ಬಿನ್ ಚಿಕ್ಕಣ್ಣ, ಉಮಾಕ್ಕ ಕೋಂ ಲಿಂಗಣ್ಣ, ದೊಡ್ಡನಂಜಪ್ಪ ಬಿನ್ ಗೋವಿಂದಯ್ಯ, ಗಂಗಯ್ಯ ಬಿನ್ ಗೋವಿಂದಯ್ಯ ಶಿವರಾಜಯ್ಯ ಬಿನ್ ಗೋವಿಂದಯ್ಯ, ನರಸೇ ಗೌಡ, ರತ್ನಮ್ಮ ಕೋಂ ಶಿವಲಿಂಗಯ್ಯ, ಗಂಗಯ್ಯ ಬಿನ್ ಲೇ. ಗೋವಿಂದಯ್ಯ | ದೊಡ್ಡನಂಜಪ್ಪ ಶಿವರಾಜಯ್ಯ ಚಿಕ್ಕಣ್ಣ, ರತ್ನಮ್ಮ, ಮಹಲಿಂಗಯ್ಯ ರಂಗಸ್ವಾನತ್ತ ಗಂಗಯ್ಯ ನರಸೇಗೌಡ ಉಮಾಕ್ಕ, ಗಂಗಯ್ಯ | 38 | 12–22 | 0–13 | 12–09 | 9–78 | ಖುಷ್ಕಿ | 39 | 28, 29 | 37 | 11 |
| 49 | ಬುಡೇನ್ ಬೇಗ್ ಕೆ.ಜಿ.ಮಹಲಿಂಗಯ್ಯ ಬಿನ್ ಗಂಗಯ್ಯ,ಕೆ.ಎನ್.ನಂಜುಂಡಯ್ಯ ಬಿನ್ ಕೆ.ಬಿ.ನಂಜಪ್ಪ | ಬುಡೇನ್ ಬೇಗ್ ಕೆ.ಜಿ ಮಹಲಿಂಗಯ್ಯ ಕೆ.ಎನ್.ನಂಜುಂಡಯ್ಯ | 40/ಪಿ1, ಪಿ2 | 2–20 | – | 2–20 | | ಖುಷ್ಕಿ | ಉಳಿಕೆ | 37, 45 | 45 | 35 |

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
|---|---|---|---|---|---|---|---|---|---|---|---|---|
| 50 | ಅಧ್ಯಕ್ಷರು ಶ್ರೀಮತಿ ರಂಗಮ್ಮ ಟ್ರಸ್ಟ್ ದೇವೀರಮ್ಮ ಕೋಂ ಸಿದ್ದಗಂಗಯ್ಯ, ಬಸವರಾಜು ಬಿನ್ ಲೇಟ್ ಚಿಕ್ಕರಂಗಯ್ಯ | ಅಧ್ಯಕ್ಷರು ಶ್ರೀಮತಿ ರಂಗಮ್ಮ ಟ್ರಸ್ಟ್ ದೇವೀರಮ್ಮ, ಬಸವರಾಜು | 45/1 | 6–02 | 0–18 | 5–24 | 6–16 | ಖುಷ್ಕಿ | 44, 40 | 35, 36 | 46 | 387 |
| 51 | ಗೌರಮ್ಮ ಕೋಂ ಬಸವರಾಜು ಸಿದ್ದಪ್ಪ ಬಿನ್ ಭೀಮಣ್ಣ ಮಹಲಿಂಗಯ್ಯ ಬಿನ್ ಭೀಮಣ್ಣ | ಗೌರಮ್ಮ, ಸಿದ್ದಪ್ಪ, ಮಹಲಿಂಗಯ್ಯ | 45/2 | 3–20 | 0–07 | 3–13 | 3–67 | ಖುಷ್ಕಿ | 44, 40 | 35, 36 | 46 | 37 |
| | ಗಂಗಯ್ಯ ಬಿನ್ ದೊಡ್ಡನಂಜಯ್ಯ, ಜಯಮ್ಮ ಕೋಂ ನರಸಿಂಹಯ್ಯ | ಗಂಗಯ್ಯ, ಪುಟ್ಟಮ್ಮ ಜಯಮ್ಮ | 46/1 | 4–00 | 0–03 | 3–37 | 4–33 | ಖುಷ್ಕಿ | 47 | 46/2 | ಕೆಂಚನ ಹಳ್ಳಿ ಗಡಿ | 45 |
| 53 | ಸಿದ್ದಯ್ಯ ಬಿನ್ ಸಿದ್ದಯ್ಯ, ಲಕ್ಷ್ಮಿದೇವಮ್ಮ ಕೋಂ ವೆಂಕಟರಮಣಪ್ಪ, ನೀಲಮ್ಮ ಕೋಂ ಮಾರ್ಕಂಡೇಯ, ಗೋವಿಂದಯ್ಯ ಬಿನ್ ತಿಮ್ಮಯ್ಯ, ಸಿದ್ದರಾಜಯ್ಯ ಬಿನ್ ಮುನಿಯಪ್ಪ, ಸಿದ್ದಯ್ಯ ಬಿನ್ ತಿಮ್ಮಯ್ಯ, ಸೀತಾರಾಮಯ್ಯ ಬಿನ್ ವೆಂಕಟಾಚಲಯ್ಯ, ಶಿವಕುಮಾರಯ್ಯ ಬಿನ್ ವೆಂಕಟಾಚಲಯ್ಯ | ಸಿದ್ದಯ್ಯ, ಲಕ್ಷ್ಮಿದೇವಮ್ಮ, ನೀಲಮ್ಮ, ಗೋವಿಂದಯ್ಯ ಸಿದ್ದರಾಜಯ್ಯ ಸಿದ್ದಯ್ಯ ಸೀತಾರಾಮಯ್ಯ ಶಿವಕುಮಾರಯ್ಯ | 46/2 | 5–34 | 0–02 | 5–32 | | ಖುಷ್ಕಿ | 46/1 | 34 | ಕೆಂಚನ ಹಳ್ಳಿ ಗಡಿ | 45 |
| 54 | ರಂಗಯ್ಯ ಬಿನ್ ನರಸಿಂಹಯ್ಯ, ಶಾರದಮ್ಮ ಕೋಂ ದಾಸಪ್ಪ | ರಂಗಯ್ಯ, ಶಾರದಮ್ಮ ಸಿದ್ದಗಂಗಯ್ಯ | 92 | 2–00 | – | 2–00 | | ಖುಷ್ಕಿ | 93 | 16 | 13 | 15 |
| 55 | ಸಿದ್ದಗಂಗಯ್ಯ ಬಿನ್ ನರಸಿಂಹಯ್ಯ ಚಿಕ್ಕಣ್ಣ ಬಿನ್ ಸಿದ್ದಯ್ಯ | ಶ್ರೀ ರಂಗಯ್ಯ | 93 | 2–00 | 0–01 | 1–39 | 2–18 | ಖುಷ್ಕಿ | ಉಳಿಕೆ | 92 | 13 | 15 |
| 56 | ರಂಗಯ್ಯ ಬಿನ್ ಶೀಬಯ್ಯ | ರಂಗಯ್ಯ, ಈರೋಬಳಯ್ಯ | 97 | 1–00 | 0–02 | 0–38 | 1–05 | ಖುಷ್ಕಿ | 34 | 31 | 32 | 31 |
| | **ಒಟ್ಟು** | | | **276-34** | **18-24** | **258-10** | | | | | | |
| | **(4) ಗ್ರಾಮ :: ಕಂಚೇನಹಳ್ಳಿ ಹೋಬಳಿ :: ಕೋರ ತಾಲ್ಲೂಕು :: ತುಮಕೂರು ಜಿಲ್ಲೆ :: ತುಮಕೂರು** | | | | | | | | | | | |
| 1 | ಹೆಚ್. ಚಂದ್ರಯ್ಯ ಬಿನ್ ಹುಚ್ಚಣ್ಣ | ಚಂದ್ರಯ್ಯ.ಹೆಚ್. | 24/1ಎ | 1–10 | 0–05 | 1–05 | 0–92 | ಖುಷ್ಕಿ | 24/2 | ಯಲ್ಲದಡ್ಲು ಗಡಿ | 25 | ಬತ್ಸಂದ್ರ ಗಡಿ |
| 2 | ಸಿದ್ದಗಂಗಯ್ಯ ಬಿನ್ ನಂಜುಂಡಯ್ಯ, ಸಿದ್ದಲಿಂಗಯ್ಯ ಬಿನ್ ನಂಜುಂಡಯ್ಯ | ಸಿದ್ದಗಂಗಯ್ಯ, ಸಿದ್ದಲಿಂಗಯ್ಯ | 24/1ಬಿ | 1–12 | 0–05 | 1–07 | 0–92 | ಖುಷ್ಕಿ | 24/2 | ಯಲ್ಲದಡ್ಲು ಗಡಿ | 25 | ಬತ್ಸಂದ್ರ ಗಡಿ |

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
|---|---|---|---|---|---|---|---|---|---|---|---|---|
| 3 | ಕೆ.ಸಿ.ಮಹದೇವಯ್ಯ ಬಿನ್ ಚಿಕ್ಕನರಸಯ್ಯ | ಕೆ.ಸಿ.ಮಹ ದೇವಯ್ಯ | 24/4 | 3–38 | 0–14 | 3–24 | 2–88 | ಖುಷ್ಕಿ | 24/5 | 24/3 | 25, 26 | ಬತ್ಸಂದ್ರ ಗಡಿ |
| 4 | ಸರ್ಕಾರಿ ಗೋಮಾಳ<br>ದೊಡ್ಡಯ್ಯ ಬಿನ್ ಉಡಸಯ್ಯ<br>ಲಕ್ಷ್ಮಮ್ಮ ಕೋಂ ದೊಡ್ಡಯ್ಯ | ಸರ್ಕಾರಿ ಗೋಮಾಳ<br>ದೊಡ್ಡಯ್ಯ, ಲಕ್ಷ್ಮಮ್ಮ | 25<br>25 ರ ಪೈಕಿ | 12–18<br>0–35 | –<br>– | 12–18<br>0–35 | 1–23 | ಖುಷ್ಕಿ<br>ಖುಷ್ಕಿ | 26 | ಯಲ್ಲದಡ್ಲು ಗಡಿ | 30 | 24 |
| 5 | ಅರಣ್ಯ ಇಲಾಖೆ | ಸರ್ಕಾರಿಗೋಮಾಳ | 30ರಪೈಕಿ | 8–33 | – | 8–33 | | ಖುಷ್ಕಿ | 29 | ಯಲ್ಲದಡ್ಲು ಗಡಿ | 31 | 25 |
| 6 | ಲಕ್ಷ್ಮಮ್ಮ ಕೋಂ ದೊಡ್ಡಯ್ಯ | ಲಕ್ಷ್ಮಮ್ಮ | 30ರ ಪೈಕಿ | 1–21 | 0–01 | 1–20 | 2–10 | ಖುಷ್ಕಿ | 29 | ಯಲ್ಲದಡ್ಲು ಗಡಿ | 31 | 25 |
| 7 | ದೊಡ್ಡಯ್ಯ ಬಿನ್ ಉಳಸಯ್ಯ ಪೂಜಾರಯ್ಯ ಮತ್ತು ಹೆಂಡತಿ ಜಯಮ್ಮ | ದೊಡ್ಡಯ್ಯ ಪೂಜಾರಯ್ಯ | 30ರಪೈಕಿ | 1–00 | – | 1–00 | 1–05 | ಖುಷ್ಕಿ | 29 | ಯಲ್ಲದಡ್ಲು ಗಡಿ | 31 | 25 |
| 8 | ಸರ್ಕಾರಿ ಗೋಮಾಳ | ಸರ್ಕಾರಿ ಗೋಮಾಳ | 31 | 10–16 | – | 10–16 | | ಖುಷ್ಕಿ | 29, 34 | ಯಲ್ಲದಡು ಗಡಿ | 32 | 30 |
| 9 | ಪೂಜಾರಯ್ಯ ಬಿನ್ ಉಳಸಯ್ಯ, ಜಯಮ್ಮ | ಪೂಜಾರಯ್ಯ | 31ರ ಪೈಕಿ | 0–28 | – | 0–28 | 0–80 | ಖುಷ್ಕಿ | 29, 34 | ಯಲ್ಲದಡ್ಲು ಗಡಿ | 32 | 30 |
| 10 | ಸರ್ಕಾರಿ ಗೋಮಾಳ | ಸರ್ಕಾರಿಗೋಮಾಳ | 32 ರ ಪೈಕಿ | 7–07 | – | 7–07 | | ಖುಷ್ಕಿ | 33 | ಯಲ್ಲದಡ್ಲು ಗಡಿ | ಸಂಕೇನಹಳ್ಳಿ ಗಡಿ | 31 |
| **ಒಟ್ಟು** | | | | **49-18** | **00-24** | **48-34** | | | | | | |
| **(5) ಗ್ರಾಮ :: ಸಂಗೇನಹಳ್ಳಿ ಹೋಬಳಿ :: ಕೋರ ತಾಲ್ಲೂಕು :: ತುಮಕೂರು ಜಿಲ್ಲೆ :: ತುಮಕೂರು** | | | | | | | | | | | | |
| 1 | ಸರ್ಕಾರಿ ಹುಲ್ಲು ಬನ್ನಿ ಖರಾಬು | ಸರ್ಕಾರಿ ಹುಲ್ಲು ಬನ್ನಿ ಖರಾಬು | 1 | 6–09 | – | 6–09 | | ಖುಷ್ಕಿ | 2 | ಯಲ್ಲದಡ್ಲು ಗಡಿ | ತಿಪ್ಪೆ ದಾಸರಹಳ್ಳಿ ಗಡಿ | ಕಂಚೇನಹಳ್ಳಿ ಗಡಿ |
| 2 | ಕೆ.ಹೆಚ್. ಸಿದ್ದರಾಮಣ್ಣ ಬಿನ್ ಹೊನ್ನಯ್ಯ | ಕೆ.ಹೆಚ್.ಸಿದ್ದರಾಮಣ್ಣ | 2/1 ರ ಪೈಕಿ | 2–20 | 0–04 | 2–16 | 3–35 | ಖುಷ್ಕಿ | 3 | 1 | 2/2 | 2/3 |
| 3 | ಚಿಕ್ಕರಂಗಯ್ಯ ಬಿನ್ ಮೂಡ್ಲಯ್ಯ | ರಂಗಪ್ಪ | 2/2 | 5–08 | 0–06 | 5–02 | 3–54 | ಖುಷ್ಕಿ | 3 | 1 | 5 | 2/1 |
| 4 | ಮಂಗಳಮ್ಮ, ಶಿವಲಿಂಗಪ್ಪ, ಸೋಮಶೇಖರಯ್ಯ, ಜಗದೀಶ, ಗೌರಮ್ಮ ಕೋಂ ಸಿದ್ದಲಿಂಗಯ್ಯ, ಬಸವರಾಜು ಬಿನ್ ಸಿದ್ದಲಿಂಗಯ್ಯ, | ಮಂಗಳಮ್ಮ, ಶಿವಲಿಂಗಪ್ಪ, ಸೋಮಶೇಖರಯ್ಯಜಗ ದೀಶ, ಗೌರಮ್ಮ, | 4 | 9–02 | 0–12 | 8–30 | 7–00 | ಖುಷ್ಕಿ | 53 | 5 | 7 | 3 |

